# ಶ್ರೀ ರಮಣ ಮಹರ್ಷಿ

(ಜೀವನ ಚರಿತ್ರೆ)



ಲೇಖಕರು:
ಅರ್ಚಿಕ ವೆಂಕಟೇಶ್
ಸ್. ರೇಣುಕ ಪ್ರಸಾದ್ ಬಿ.ಎ.,





ಪ್ರಕಾಶಕರು:
ವಿದ್ಯಾರ್ಥಿ ಪ್ರಕಟನಾಲಯ,
ಬೆಂಗಳೂರು-೨.

ವಿದ್ಯಾರ್ಥಿ ಗ್ರಂಥಮಾಲೆ: ೩

# ಶ್ರೀ ರಮಣ ಮಹರ್ಷಿ

(ಜೀವನ ಚರಿತ್ರೆ)



ಲೇಖಕರು:
ಅರ್ಚಿಕ ವೆಂಕಟೇಶ್
ಎಚ್.ಎಸ್. ರೇಣುಕ ಪ್ರಸಾದ್ ಬಿ.ಎ.,

(ರಾಜಸೇವಾಸಕ್ತ ಸಿ.ಕೆ. ವೆಂಕಟರಾಮಯ್ಯ ಎಂ.ಎ.,ಎಲ್ಎಲ್.ಬಿ.,
ಅವರ ಮುನ್ನುಡಿಯೊಡನೆ)



ಪ್ರಕಾಶಕರು:
ವಿದ್ಯಾರ್ಥಿ ಪ್ರಕಟನಾಲಯ,
ಬೆಂಗಳೂರು-೨.

# ಬಿನ್ನಹ

ಪಾಶ್ಚಾತ್ಯ ಜನರ ಸಂಪರ್ಕದಿಂದ ನಮ್ಮ ಭಾರತೀಯ ಜನರ ಮನಸ್ಸಿನಲ್ಲಿ ಐಹಿಕ ಸುಖವೇ ಮುಖ್ಯವೆಂದೂ ಪಾರಮಾರ್ಥಿಕವೆಂಬುದು ಇಲ್ಲವೇ ಇಲ್ಲವೆಂದೂ ದೇಶದಲ್ಲಿ ಎಲ್ಲೆಲ್ಲಿಯೂ ಭಾವನೆ ಹಬ್ಬಿದ ಕಾಲದಲ್ಲಿ, ಪರಮೇಶ್ವರನ ಕೃಪೆಯಿಂದ ನಮ್ಮ ಪವಿತ್ರ ಭಾರತವಲ್ಲಿ ಕೆಲವು ಮಂದಿ ವಿಭೂತಿ ಪುರುಷರು ಹುಟ್ಟಿ ಭಾರತೀಯ ಸಂಸ್ಕೃತಿಯನ್ನು ಉದ್ಧಾರ ಮಾಡಿ ಮೈಮರೆತಿದ್ದ ತರುಣ ಜನಾಂಗವನ್ನು ಎಚ್ಚರಿಸಿ ತಮ್ಮತನದ ಅರಿವನ್ನು ಅವರಿಗೆ ಮಾಡಿಕೊಟ್ಟು, ಆತ್ಮಗೌರವದ ಹಾದಿಯಲ್ಲಿ ತರುಣರು ಮುಂದುವರಿಯುವಂತೆ ಜನತೆಗೆ ಸ್ಫೂರ್ತಿಯನ್ನುಂಟುಮಾಡಿದುದು ಒಂದು ಅಪೂರ್ವವಾದ ಯೋಗಾಯೋಗನೆಂದು ಹೇಳಬಹುದು.

ಈ ಮೇಲೆ ಕಂಡ ಮಹತ್ವದ ಕಾರ್ಯವನ್ನು ಮಾಡಿದ ಮಹಾ ಪುರುಷರಲ್ಲಿ ರಾಮಕೃಷ್ಣ ಪರಮಹಂಸರು, ರವೀಂದ್ರನಾಥ ಠಾಕೂರರು, ರಮಣ ಮಹರ್ಷಿಗಳು, ಅರವಿಂದ ಘೋಷರು, ಮತ್ತು ಮಹಾತ್ಮ ಗಾಂಧಿಯವರು ಎಂಬ ಈ ಐದುಮಂದಿ ಪುಣ್ಯಾತ್ಮರ ಹೆಸರು ಎಲ್ಲ ಜನಗಳ ಕಣ್ಮುಂದೆ ಎದ್ದು ಕಾಣುತ್ತವೆ. ಪರಮಹಂಸರೂ ವಿವೇಕಾನಂದಾದಿ ಅವರ ಶಿಷ್ಯ ಪರಂಪರೆಯವರೂ, ರಮಣ ಮಹರ್ಷಿಗಳೂ ಅವರ ಅನುಯಾಯಿಗಳೂ, ಅರವಿಂದ ಘೋಷರೂ ಅವರ ಔಪಾಸಕರೂ ವಿಶೇಷವಾಗಿ ಆಧ್ಯಾತ್ಮದ ವಿಚಾರಗಳಲ್ಲಿ ಕ್ರಾಂತಿಯನ್ನುಂಟುಮಾಡಿ ಭಾರತೀಯರನ್ನು ತಮ್ಮ ಪ್ರಾಚೀನ ಸಂಸ್ಕೃತಿಯ ಕಡೆಗೆ ಸೆಳೆದುದಲ್ಲದೆ ಪ್ರಪಂಚದ ವಿವೇಕಿಗಳೆಲ್ಲರ ಮನಸ್ಸನ್ನೂ ಭಾರತದ ಕಡೆಗೆ ಆಕರ್ಷಿಸಿ ಮಹೋಪಕಾರ ಮಾಡಿದರು. ಠಾಗೂರರು ಸಾಹಿತ್ಯ ಕ್ಷೇತ್ರದಲ್ಲಿಯೂ, ಗಾಂಧೀಜಿ ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿಯೂ ಅದ್ಭುತವಾದ ಕ್ರಾಂತಿಯನ್ನು ಮಾಡಿ ವಿಶ್ವದ ಮಾರುಕಟ್ಟೆಯಲ್ಲಿ ಭಾರತಕ್ಕೆ ಹೆಚ್ಚು ಬೆಲೆ ಬರುವಂತೆ ಮಾಡಿದರು. ಕೈ|| ಜಗದೀಶ ಚಂದ್ರಬೋಸರೂ ಸರ್ ಸಿ.ವಿ. ರಾಮನ್‌ರವರೂ ವೈಜ್ಞಾನಿಕ ಸಂಶೋಧನೆಗಳಲ್ಲಿ ಹೆಚ್ಚಿನ

ಪ್ರಾವೀಣ್ಯತೆಯನ್ನು ತೋರಿಸಿ ಭಾರತದ ಪ್ರತಿಭೆಯನ್ನು ಪ್ರಪಂಚದ ಮುಂದೆ ಬೆಳಗಿಸಿದರು. ಈ ಎಲ್ಲವಿಚಾರಗಳನ್ನೂ ಸ್ಮರಿಸಿಕೊಂಡರೆ ಆತ್ಮ ಗೌರವವುಳ್ಳ ಯಾವ ಭಾರತೀಯನಿಗೆ ತಾನೆ ಸಂತೋಷವಾಗುವುದಿಲ್ಲ ?

ಭಾರತದ ಮುಂದಿನ ಪ್ರಜೆಗಳಾದ ವಿದ್ಯಾರ್ಥಿಗಳ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವನ್ನುಂಟುಮಾಡುವಂತಹ, ಅವರನ್ನು ಮೇಲು ಮಟ್ಟದ ದಾರಿಯಲ್ಲಿ ಮುಂದೊಯ್ಯುವಂತಹ ಉತ್ತಮವಾದ ಗ್ರಂಥಗಳನ್ನು ಕನ್ನಡ, ಇಂಗ್ಲಿಷ್ ಮೊದಲಾದ ಭಾಷೆಗಳಲ್ಲಿ ಪ್ರಕಟಿಸಿ ನಮ್ಮ ಸಾಹಿತ್ಯಕ್ಕೂ ಸಮಾಜಕ್ಕೂ ಯಥಾಶಕ್ತಿ ಸೇವೆಯನ್ನು ಸಲ್ಲಿಸುವ ಸದುದ್ದೇಶದಿಂದ ಈ ವಿದ್ಯಾರ್ಥಿ ಗ್ರಂಥಮಾಲೆಯು ಬೆಂಗಳೂರಲ್ಲಿ ಪ್ರಾರಂಭಿಸಲ್ಪಟ್ಟಿದೆ. ಈಗಾಗಲೇ ಈ ಮಾಲೆಯಲ್ಲಿ 'ಗಾಂಧಿ ಗೀತೆಗಳು' ಎಂಬ ಪುಟ್ಟ ಕವನ ಸಂಗ್ರಹವೂ, "ಸರ್ವಜ್ಞ ಮೂರ್ತಿ" ಎಂಬ ಕವಿ-ಕಾವ್ಯ ವಿಮರ್ಶೆಯೂ ಪ್ರಕಟವಾಗಿ ಜನಪ್ರಿಯವೆನಿಸಿವೆ. ಈಗ ಮೂರನೆಯದಾಗಿ 'ಶ್ರೀ ರಮಣ ಮಹರ್ಷಿ' ಎಂಬ ಜೀವನ ಚರಿತ್ರೆಯು ನಮ್ಮ ಪ್ರಿಯ ವಾಚಕವರ್ಗದ ಕೈಸೇರಿದೆ. ಇದಾದ ಮೇಲೆ ಇಂತಹವೇ ಆದ ಮತ್ತೆ ಕೆಲವು ಗ್ರಂಥಗಳು ಪ್ರಕಟವಾಗಲಿವೆ. ಈ ಎಲ್ಲವೂ ನಮ್ಮ ವಾಚಕವರ್ಗದ ಪ್ರೋತ್ಸಾಹವನ್ನು ವಿಶೇಷವಾಗಿ ಅವಲಂಬಿಸಿದೆಯೆಂದು ನಾವು ಹೇಳಬೇಕಾಗಿದೆ.

'ಶ್ರೀ ರಮಣ ಮಹರ್ಷಿ' ಎಂಬ ಪುಸ್ತಕವನ್ನು ವಿದ್ಯಾರ್ಥಿ ಮಾಸಿಕದ ಸಂಪಾದಕರೂ, 'ಶರಣ ಸಾಹಿತ್ಯ'ದ ಉಪಸಂಪಾದಕರೂ ಆದ ಶ್ರೀ ಎಚ್. ಎಸ್. ರೇಣುಕ ಪ್ರಸಾದ್ ಬಿ. ಎ.,ರವರೂ 'ವಿಶ್ವಕರ್ಣಾಟಕ' ದಿನ ಪತ್ರಿಕೆಯ ಉಪಸಂಪಾದಕರೂ ಈಗಾಗಲೇ ಹಲವು ಗ್ರಂಥಗಳಿಂದ ಕನ್ನಡಿಗರಿಗೆ ಸುಪರಿಚಿತರೂ ಆದ ಶ್ರೀ ಅರ್ಚಿಕ ವೆಂಕಟೇಶ್‌ರವರೂ ಕೂಡಿ ಬರೆದಿದ್ದಾರೆ. ಈ ಗ್ರಂಥರಚನೆಯಲ್ಲಿ ಅವರು ಇದಕ್ಕೆ ಸಂಬಂಧಪಟ್ಟ ಹಲವು ಇಂಗ್ಲೀಷ ಮತ್ತು ತಮಿಳು ಗ್ರಂಥಗಳನ್ನು ಅವಲೋಕಿಸಿದ್ದಾರೆ. ಮಹರ್ಷಿಗಳ ಜನ್ಮಸ್ಥಳವಾದ ಶ್ರೀಕ್ಷೇತ್ರ ತಿರುಚ್ಚುಳಿ ಮತ್ತು ಅವರ ತಪೋಭೂಮಿಯಾದ ಶ್ರೀಕ್ಷೇತ್ರ ಅರುಣಾಚಲಂ ಮೊದಲಾದ ಕಡೆಗಳಿಂದ ಉಪಯುಕ್ತವಾದ ವಿಷಯಗಳನ್ನು

ಸಂಗ್ರಹಿಸಿದ್ದಾರೆ. ಕಾರಣ ಆ ಎಲ್ಲ ಗ್ರಂಥಕರ್ತರಿಗೂ ವಿಷಯಗಳನ್ನು ಸಂಗ್ರಹಿಸಿ ಕೊಟ್ಟವರಿಗೂ ಗ್ರಂಥಕರ್ತರು ಋಣಿಗಳು.

'ಶ್ರೀ ರಮಣ ಮಹರ್ಷಿ' ಎಂಬ ಪುಸ್ತಕವು ಆ ಮಹಾಜೀವನದ ಸಾರ ಸರ್ವಸ್ವವನ್ನು ಸಂಗ್ರಹವಾಗಿ ವಾಚಕರಿಗೆ ಒದಗಿಸುವ ಉದ್ದೇಶದಿಂದ ವಿರಚಿತವಾಗಿದೆ. ವಿಶೇಷವಾಗಿ ಈ ಗ್ರಂಥವನ್ನು ನಾಡಿನ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಬರೆಯಲಾಗಿದೆ. ಭಾಷೆಯು ಶುದ್ಧವಾಗಿಯೂ, ವಿಷಯವು ಸ್ವಾರಸ್ಯವಾಗಿಯೂ; ನಿರೂಪಣೆಯು ಸರಳವಾಗಿಯೂ ಇರಲು ಪ್ರಯತ್ನಿಸಲಾಗಿದೆ. ಇದು ಎಷ್ಟು ಮಟ್ಟಿಗೆ ಜನಪ್ರಿಯವಾಗುವುದೆಂಬ ಮಾತು ಭವಿಷ್ಯಕ್ಕೆ ಸೇರಿದುದು.

ಈ ಗ್ರಂಥವನ್ನು ಬೆಂಗಳೂರು ಸ್ವತಂತ್ರ ಕರ್ಣಾಟಕ ಮುದ್ರಣಾಲಯದ ವ್ಯವಸ್ಥಾಪಕರು ಅಂದವಾಗಿಯೂ ಅವಸರವಾಗಿಯೂ ಅಚ್ಚು ಮಾಡಿ ಕೊಟ್ಟು ನಮಗೆ ಉಪಕಾರ ಮಾಡಿದ್ದಾರೆ. ಕನ್ನಡ ನಾಡಿನ ಸುಪ್ರಸಿದ್ಧ ಸಾಹಿತಿಗಳೂ, ಗ್ರಂಥಕರ್ತರೂ ಆದ ರಾಜಸೇವಾಸಕ್ತ ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯ ಎಂ.ಎ.,ಎಲ್.ಎಲ್.ಬಿ. ರವರು ನಮ್ಮ ಕೋರಿಕೆಯಂತೆ ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆದುಕೊಟ್ಟು ಹರಸಿದ್ದಾರೆ. ಆದಕ್ಕಾಗಿ ಆ ಮಹನೀಯರಿಗೆ ನಮ್ಮ ವಂದನೆಗಳು.

ತಾ|| ೨೦-೯-೫೧

ಬೆಂಗಳೂರು.

ಪ್ರಕಾಶಕರು
'ವಿದ್ಯಾರ್ಥಿ ಪ್ರಕಟನಾಲಯ'

# ಮುನ್ನುಡಿ

ಮಾನವನ ಮನಸ್ಸಿನಲ್ಲಿ ತತ್ತ್ವ ಜಿಜ್ಞಾಸೆಯು ಪ್ರಾರಂಭವಾದ ಪ್ರಾಚೀನ ಕಾಲದಿಂದ ಇಂದಿನವರೆಗೂ ದರ್ಶನ ಶಾಸ್ತ್ರವು ವೃದ್ಧಿಹೊಂದುತ್ತ ಬಂದಿದೆ. ಪ್ರಪಂಚದಲ್ಲೇ ಮೊಟ್ಟಮೊದಲನೆಯ ದಾರ್ಶನಿಕನಾದ ಅಘಮರ್ಷಣ ಋಷಿಯನ್ನು ಪಡೆಯುವ—ಎಂದರೆ ತತ್ತ್ವಜಿಜ್ಞಾಸೆಯನ್ನು ಮೊಟ್ಟ ಮೊದಲು ಪ್ರಾರಂಭಿಸುವ-ಸುಯೋಗವು ಭಾರತಕ್ಕೆ ಲಭಿಸಿತು. ಅಂದಿನಿಂದ ಇಂದಿನವರೆಗೂ ನಮ್ಮ ದೇಶದಲ್ಲೂ, ಇತರ ದೇಶಗಳಲ್ಲೂ ಅಸಂಖ್ಯಾತಮಂದಿ ದಾರ್ಶನಿಕರೂ, ಸಾಧುಸಂತರೂ ಜನ್ಮವೆತ್ತಿ ತಮ್ಮ ಸಾಧನೆಗಳ ಮತ್ತು ಜ್ಞಾನಾನುಭವಗಳ ನಿಧಿಗಳನ್ನು ಜನತೆಗೊಪ್ಪಿಸಿ ಕೃಪೆಮಾಡಿದ್ದಾರೆ. ಅವರಲ್ಲಿ ಈಚಿನವರಾದ ಶ್ರೀ ರಮಣ ಮಹರ್ಷಿಗಳೂ ಒಬ್ಬರು. ಅವರ ಜೀವನ ಚರಿತ್ರೆಯು ಸಂಕ್ಷೇಪವಾಗಿಯೂ ಸ್ವಾರಸ್ಯವಾಗಿಯೂ ಚಿತ್ರಿತವಾಗಿರುವ ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆಯುವ ಸಂತೋಷವು ನನಗೆ ಲಭಿಸಿದೆ.

ಧಾರ್ಮಿಕ ಕ್ಷೇತ್ರದಲ್ಲಿ ಬಹಳ ಕೆಲಸ ನಡೆದಿದೆ. ಅನೇಕ ಸಿದ್ಧಾಂತಗಳು ಪ್ರತಿಪಾದಿತವಾಗಿವೆ. ತಾವು ಅಭಿಮಾನ ತೋರಿಸಿ ಅನುಸರಿಸುತ್ತಿರುವ ಸಿದ್ಧಾಂತವೇ ಸರ್ವಶ್ರೇಷ್ಠ, ಇತರರು ಅನುಸರಿಸುತ್ತಿರುವ ಸಿದ್ಧಾಂತಗಳು ನಿಕೃಷ್ಟ-ಎಂಬ ಮನೋಧರ್ಮವನ್ನಿಟ್ಟುಕೊಂಡಿರುವವರ ದುರಭಿಮಾನದ ಪರಿಣಾಮವಾಗಿ ನಡೆದಿರುವ ಹೋರಾಟ ಹೊಡೆದಾಟಗಳು ಕಡಿಮೆಯಾಗಿಲ್ಲ. ಯಾವ ದಾರ್ಶನಿಕರೂ, ಯಾವ ಸಾಧುಸಂತರೂ, ಯಾವ ಮತಸ್ಥಾಪಕರೂ ಜೀವನ ಸಮಸ್ಯೆಗಳೆಲ್ಲವನ್ನೂ ಬಗೆಹರಿಸಿ ಪೂರ್ಣಸತ್ಯದ ಸುವರ್ಣ ದ್ವಾರವನ್ನು ತೆರೆದಿಟ್ಟಿಲ್ಲವೆಂಬುದರ ಕಡೆಗೆ ಗಮನಕೊಡದೆ ಹೋದುದೇ ಆ ಹೋರಾಟ ಹೊಡೆದಾಟಗಳಿಗೆಲ್ಲ ಮುಖ್ಯ ಕಾರಣ.

ಮತಸ್ಥಾಪಕರಾದ ಮಹಾಪುರುಷರಲ್ಲಿ ಯಾರೊಬ್ಬರು ಪ್ರತಿಪಾದಿಸಿರುವ ಸಿದ್ಧಾಂತವೂ ಒಂದಲ್ಲ ಮತ್ತೊಂದು ರೀತಿಯಲ್ಲಿ ಊನವಾಗಿಯೇ ಇದೆಯೆಂಬ ಭಾವನೆಯು ಮನಸ್ಸಿನಲ್ಲಿ ಮೂಡಿದೊಡನೆಯೇ ಅವರೆಲ್ಲರಲ್ಲಿಯೂ ಭಕ್ತಿ ಪ್ರೇಮಗಳು ಹುಟ್ಟುವುವು. ಹೃದಯವು ವಿಶಾಲವಾಗುವುದು. ಭೂಲೋಕದಲ್ಲಿ ಸರ್ವಜ್ಞ ಸಿಂಹಾಸನವು ಸರ್ವದಾ ಶೂನ್ಯವಾಗಿರುವುದೇ ಅದರ ವೈಶಿಷ್ಟ್ಯ

ವೆಂದು ಮನವರಿಕೆಯಾಗುವುದು. ಸರ್ವಜ್ಞಸಿಂಹಾಸನವನ್ನೇರಲು ಭಗವಂತನೊಬ್ಬನೇ ಪೂರ್ಣಾಧಿಕಾರಿಯೇ ಹೊರತು ಮಾನವ ಕುಲದಲ್ಲಿ ಜನಿಸಿದ ಎಂತಹ ಮಹಾ ಪುರುಷರಿಗೂ ಅದನ್ನೇರಲು ಅಧಿಕಾರವಿಲ್ಲವೆಂಬ ಮನೋಧರ್ಮವು ಕುದುರುವುದು. ಹೀಗಾಗುವುದೇ ವಿಶ್ವಶಾಂತಿಗೆ ತಳಹದಿ. ಹೀಗಾದರೇಯೇ ನಮ್ಮ ನಮ್ಮ ಮತಾಚಾರ್ಯರುಗಳು ಮಾತ್ರವೇ ಅಲ್ಲದೆ ಇತರ ಮತಾಚಾರ್ಯರುಗಳೂ ಮಹಾಪುರುಷರೆಂಬ ಸದ್ಭಾವನೆಯು ಹುಟ್ಟುವುದು ಸಾಧ್ಯ. ಮತಸ್ಥಾಪಕರಾದ ಎಲ್ಲ ಮಹಾಪುರುಷರ ಜೀವನಗಳೂ, ಇತರ ಸಾಧುಸಂತರೆಲ್ಲರ ಜೀವನಗಳೂ ಭವ್ಯವಾಗಿವೆ. ಒಂದೊಂದು ಹೂವಿನಲ್ಲಿ ಒಂದೊಂದು ಸೊಬಗಿರುವಂತೆ ಅವರಲ್ಲಿ ಪ್ರತಿಯೊಬ್ಬರ ಜೀವನವೂ ರಮಣೀಯವಾಗಿದೆ.

ಆದಕಾರಣ, ಶ್ರೀ ರಮಣ ಮಹರ್ಷಿಗಳ ಜೀವನ ಚರಿತ್ರೆಯನ್ನೂ ಅವರ ಉಪದೇಶ ವಾಣಿಗಳನ್ನೂ ಕುರಿತು ಸಂಕ್ಷೇಪವಾಗಿ ಬರೆದಿರುವ ಈ ಪುಸ್ತಕವನ್ನು ಆದರದಿಂದ ಸ್ವಾಗತಿಸುವುದು ಕನ್ನಡಿಗರ ಅವಶ್ಯಕರ್ತವ್ಯ. ಮಹಾಪುರುಷರ ಜೀವನ ಚರಿತ್ರೆಯೇ ಜಗತ್ತಿನ ಇತಿಹಾಸವೆಂಬುದನ್ನೂ ನಾವು ಮರೆಯಬಾರದು. ಶ್ರೀವರ್ಮಾ ಅರ್ಚಕ ವೆಂಕಟೇಶ್ ಅವರೂ, ಶ್ರೀ ವರ್ಮಾ ಎಚ್. ಎಸ್. ರೇಣುಕಪ್ರಸಾದ್ ಬಿ.ಎ., ಅವರೂ ಬಹಳ ಶ್ರಮಪಟ್ಟು ಸಂಗತಿಗಳನ್ನು ಸಂಗ್ರಹಿಸಿ, ಸರಳವಾದ ಶೈಲಿಯಲ್ಲಿ, ಚಿತ್ತಾಕರ್ಷಕವಾಗಿರುವಂತೆ ಈ ಪುಸ್ತಕವನ್ನು ಬರೆದಿದ್ದಾರೆ. ಸ್ವಾರಸ್ಯವಾಗಿರುವಂತೆ ಗ್ರಂಥರಚನೆಮಾಡಿ ಕನ್ನಡ ಸಾಹಿತ್ಯಕ್ಕೆ ಉತ್ತಮರೀತಿಯಲ್ಲಿ ಸೇವೆಸಲ್ಲಿಸಿದಾರೆ. ಕನ್ನಡಿಗರಿಗೆ ಉಪಕಾರ ಮಾಡಿದ್ದಾರೆ. ಇವರಿಬ್ಬರಿಗೂ ಇನ್ನೂ ಅನೇಕ ಗ್ರಂಥಗಳನ್ನು ರಚಿಸಿ, ತಮ್ಮ ತಮ್ಮ ಕಾರ್ಯಕ್ಷೇತ್ರಗಳಲ್ಲಿ ಸಾಹಿತ್ಯ ಸೇವೆಯಿಂದ ಈಗಾಗಲೇ ಗಳಿಸಿರುವ ಖ್ಯಾತಿಯನ್ನು ಇನ್ನೂ ಹೆಚ್ಚು ಮಾಡಿಕೊಳ್ಳುವಂತಾಗಲೆಂಬುದೇ ನನ್ನ ಹಾರೈಕೆ. ಮುದ್ದಾಗಿ ಬರೆದಿರುವ ಈ ಪುಸ್ತಕಕ್ಕೆ ಕನ್ನಡಿಗರಿಂದ ತಕ್ಕಷ್ಟು ಪ್ರೋತ್ಸಾಹವು ಲಭಿಸುವುದೆಂಬುದು ನನ್ನ ನಂಬಿಕೆ.

ಬೆಂಗಳೂರು, ಸಿ. ಕೆ. ವೆಂಕಟರಾಮಯ್ಯ

ತಾ॥ ೨೦-೯-೧೯೫೧.

# ಪರಿವಿಡಿ







ಶ್ರೀ ರಮಣ ಮಹರ್ಷಿಗಳ ಜನ್ಮಸ್ಥಳವಾದ ಶ್ರೀಕ್ಷೇತ್ರ ತಿರುಚ್ಚುಳಿಯಲ್ಲಿರುವ

ಶ್ರೀ ಮಾತೃಭೂತೇಶ್ವರ ದೇವಸ್ಥಾನ

# ಶ್ರೀ ರಮಣ ಮಹರ್ಷಿ

## ೧

### ಮಹೋದಯ

ಭಾರತಭೂಮಿ ಪುಣ್ಯದ ನೆಲೆವೀಡು. ಈ ದೇಶದಲ್ಲಿ ಜನ್ಮ ತಾಳಿದಷ್ಟು ಬ್ರಹ್ಮಜ್ಞಾನಿಗಳು ಪ್ರಪಂಚದ ಮತ್ತಾವ ನಾಡಿನಲ್ಲೂ ಹುಟ್ಟಿಲ್ಲ. ಬಹಳ ಹಿಂದೆಯೇ ಜನಕ, ಶುಕ, ವಾಮದೇವ, ಹಸ್ತಾಮಾಲಕರಂಥ ಮಹಾತ್ಮರು ಉದಯಿಸಿ, ಜ್ಞಾನದ ಪಂಜನ್ನು ಹಿಡಿದು, ಜಗತ್ತಿನಲ್ಲಿ ಕವಿದಿದ್ದ ಅಂಧಕಾರವನ್ನು ನಿರ್ಮೂಲಗೊಳಿಸಿದರು; ಜೀವನ್ಮುಕ್ತರೆಂದು ಚಿರಕೀರ್ತಿ ಗಳಿಸಿದರು.

ಅದೇ ಜಾಡಿನಲ್ಲಿ ಬಂದ ಆಧುನಿಕ ಮಹಾತ್ಮರಲ್ಲಿ ಪೂಜ್ಯ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಸ್ವಾಮಿ ದಯಾನಂದ ಸರಸ್ವತಿ, ಅರವಿಂದ ಘೋಷ್ ಇನ್ನೂ ಹಲವಾರು ಮಂದಿ ಜಗತ್ತಿಗೆ ಬೆಳಕು ಬೀರಿದರು; ಜನಜೀವನಕ್ಕೆ ಮಹೋನ್ನತವಾದ ದಾರಿ ತೋರಿದರು.

ಆದರೇನು ? ಎಷ್ಟುಮಂದಿ ಬಂದರೂ ಭಾರತಿ ಸ್ವಾಗತವಿತ್ತಿದ್ದಾಳೆ. ಹರಸಿ ಮೇಲಕ್ಕೆತ್ತಿದ್ದಾಳೆ. ಪಾಲಿಸಿ ಮುಂದೆ ನೂಕಿದ್ದಾಳೆ. ಅವರ ಮೂಲಕ ಜಗತ್ತಿನ ಶಾಂತಿಗೆ ದಾರಿ ತೋರಿದ್ದಾಳೆ.

ರಾಮಕೃಷ್ಣ, ವಿವೇಕಾನಂದ, ರಾಮತೀರ್ಥ, ದಯಾನಂದ, ಅರವಿಂದರ ಮಹೋನ್ನತ ಪಂಕ್ತಿಗೆ ಸೇರಲು ಮತ್ತೊರ್ವ ಮಹಾಪುರುಷ ಬಂದನು. ಆತನಿಗೂ ಭಾರತಮಾತೆ ಹೃತ್ಪೂರ್ವಕ ಸ್ವಾಗತವಿತ್ತಳು. ಆಧ್ಯಾತ್ಮದ ಆಕಾಶದಲ್ಲಿ ಚಿರಸ್ಥಾನ ಕಲ್ಪಿಸಿ, 'ಬಾ ಮಗು' ಎಂದು ಅಕ್ಕರೆಯಿಂದ ಕರೆದಳು.

ಈ ಕರೆಗೆ 'ಓ ಗೊಟ್ಟು' ಮುಂದೆ ಬಂದವರೇ ಭಗವಾನ್ ಶ್ರೀರಮಣ ಮಹರ್ಷಿಗಳು.

ಮಧುರೆಯ ದಕ್ಷಿಣಕ್ಕೆ ಮೂವತ್ತು ಮೈಲಿ ದೂರದಲ್ಲಿ ರಾಮನಾಥ ಜಿಲ್ಲೆಗೆ ಸೇರಿದ ಒಂದು ಹಳ್ಳಿಯಿದೆ. ಅದರ ಹೆಸರು ತಿರುಚ್ಚುಳಿ.* ಪುಣ್ಯ ನದಿ :ಕೌಂಡಿನ್ಯ ಇಲ್ಲಿ ಹರಿದು ಈ ಕ್ಷೇತ್ರವನ್ನು ಪಾವನ ಮಾಡಿದೆ. ಅನಂತಾನಂತ ಶತಮಾನಗಳಿಂದ ಪುಣ್ಯಮೂರ್ತಿ ಶ್ರೀ ಭೂಮಿನಾಥೇಶ್ವರ ಇಲ್ಲಿ ನೆಲೆ ನಿಂತಿದ್ದಾನೆ. ಭಕ್ತಕೋಟಿಯನ್ನು ಉದ್ಧರಿಸಿದ್ದಾನೆ.

ತಿರುಚ್ಚುಳಿ ಪ್ರಕೃತಿ ಮಾತೆಯ ನಲ್ಮೆಯ ಶಿಶು. ಎತ್ತ ನೋಡಿದರತ್ತ ಕಣ್ಣಿಗೆ ಹಬ್ಬವನ್ನುಂಟುಮಾಡುವ ಭತ್ತ, ಬಾಳೆ, ತೆಂಗು, ಹತ್ತಿ, ಕಬ್ಬು, ಜೋಳಗಳಿಂದ ಕೂಡಿದ ವನರಾಜಿ. ನಿತ್ಯ ಸೌರಭ ಬೀರುವ ಹೂದೋಟ. ಹೆಚ್ಚೇನು ಅದು ಪ್ರಕೃತಿಶ್ರೀಯ ಆಡುಂಬೊಲ.

ಪುಣ್ಯದ ಬೀಡಾದ ಈ ತಿರುಚ್ಚುಳಿಯಲ್ಲಿ ದೀನಬಂಧುಗಳೂ, ಸರ್ವಜನ ಪ್ರಿಯರೂ ಎಂದು ಹೆಸರಾಗಿದ್ದ ಸುಂದರಂ ಅಯ್ಯರ್ ವಾಸವಾಗಿದ್ದರು. ಅವರು ವೃತ್ತಿಯಿಂದ ವಕೀಲರು. ಪ್ರವೃತ್ತಿಯಿಂದ ಆಧ್ಯಾತ್ಮ ಜೀವಿಗಳು, ಧರ್ಮ ನಿರತರು, ಪರೋಪಕಾರಾನ್ವಿತರು. ಇವರ ಮನೆ ಅತಿಥಿ ಸತ್ಕಾರಕ್ಕೆ ಹೆಸರಾಂತಿತ್ತು.

ಇಂಥ ಉದಾರಿಯೂ ಧರ್ಮಶೀಲರೂ ಆದ ಸುಂದರಂ ಅಯ್ಯರಿಗೆ ದೇವರು ತಕ್ಕ ಸತೀಮಣಿಯನ್ನು ಅನುಗ್ರಹಿಸಿದ್ದನು. ಮಹಾತಾಯಿ ಅಳ ಗಮ್ಮಾಳ್‌ರವರೇ ಅಯ್ಯರರ ಧರ್ಮಪತ್ನಿ.

ಅಲಗಮ್ಮಾಳ್ ಪರಮ ದೈವಭಕ್ತೆ. ಸಾಧ್ವೀ ಶಿರೋಮಣಿ. ಪ್ರತಿ ದಿನ ದೇವರ ಪೂಜೆ, ಧರ್ಮಕಾರ್ಯ, ವ್ರತೋಪವಾಸ, ಪುರಾಣ ಪುಣ್ಯವಚನ ಶ್ರವಣದಲ್ಲಿ ಆಕೆಗೆ ಅಪಾರವಾದ ಆಸಕ್ತಿ. ಮನೆಯಲ್ಲಿ ಅವ್ಯಾಹತವಾಗಿ ಸಾಗು ತ್ತಿದ್ದ ಅತಿಥಿ ಸತ್ಕಾರಕ್ಕೆ ಮೊದಲು ಗಮನವಿತ್ತು, ಅನಂತರ ತಮ್ಮ ನಿತ್ಯ ಕರ್ಮಗಳಿಗೆ ಆ ತಾಯಿ ಗಮನವೀಯುತ್ತಿದ್ದರು. ಬಂದವರನ್ನು ಆದರಿಸು ವುದೇ ಸುಂದರಂ ಅಯ್ಯರ್ ಮತ್ತು ಅಲಗಮ್ಮಾಳ್‌ರವರ ಪರಮೋತ್ತಮ ಧರ್ಮವಾಗಿತ್ತು. ಅತಿಥಿಯಲ್ಲಿ ಪರಮಾತ್ಮನ ಸಾಕ್ಷಾತ್ಕಾರವನ್ನವರು ಕಾಣು

---

* 'ತಿರುಚ್ಚುಳಿ'ಯೆಂದರೆ ತಮಿಳಿನಲ್ಲಿ 'ಓಂಕಾರ' ಎಂದರ್ಥ.

ತ್ತಿದ್ದರು. ಬಡವ ಬಲ್ಲಿದನೆಂಬ ಭೇದವನ್ನು ಕನಸು ಮನಸಿನಲ್ಲೂ ಕಾಣರು. ರೋಗಿಗಳಿಗೆ ಶುಶ್ರೂಷೆಗೈವುದೆಂದರೆ ಅವರಿಗೆ ಪ್ರಿಯವಾದ ಕಾರ್ಯವಾಗಿತ್ತು. 'ಅತಿಥಿದೇವೋ ಭವ' ಎಂಬ ವೇದಮಂತ್ರದ ಅರ್ಥವನ್ನು ಅವರು ಅರಿತು ಆಚರಿಸುತ್ತಿದ್ದರು.

ಸುಂದರಂ ಅಯ್ಯರ್ ತಾವು ಗಳಿಸಿದ್ದನ್ನೆಲ್ಲ ಮಾನವರ ಹಿತಕ್ಕಾಗಿ ಧಾರಾಳವಾಗಿ ವೆಚ್ಚಮಾಡಿಬಿಡುತ್ತಿದ್ದರು.

ಪತಿಗೆ ತಕ್ಕ ಸತಿ; ಸತಿಗೆ ತಕ್ಕ ಪತಿ ಕೂಡಿದ ಆ ಸಂಸಾರ ಹೂವಿನಲ್ಲಿ ವಾಸನೆ ಬೆರೆತಂತಿತ್ತು.

ಗಂಡು ಮಗು ಹುಟ್ಟಿದರೆ ಯಾರಾದರೂ ಅಳುತ್ತಾರೆಯೆ? ಇಲ್ಲ. ಆದರೆ, ಅಲಗಮ್ಮಾಳ್ ಹೆತ್ತ ಮೂರನೆಯ ಮಗು, ಗಂಡಾದರೂ ಅದರ ಅಜ್ಜಿ ಗಳಗಳನೆ ಅತ್ತುಬಿಟ್ಟರು. ಅವರ ದುಃಖವನ್ನು ಕಂಡು ಪಕ್ಕದಲ್ಲಿದ್ದ ಮುದುಕಿ ಸಮಾಧಾನಪಡಿಸಿ, "ಶಿಶು ಭೂಮಿಗೆ ಬಿದ್ದೊಡನೆಯೇ ದಿವ್ಯಜ್ಯೋತಿ ಸೋಂಕಿ ದುದನ್ನು ನಾನು ಕಂಡೆ. ಆದ್ದರಿಂದ ಈ ಮಗುವಿನ ಜಾತಕ ಅತ್ಯುತ್ಕೃಷ್ಟ ವಾಗಿದೆ" ಎಂದು ಹೇಳಿದಳು.

ಪ್ರಮಾದಿ ಸಂವತ್ಸರದ ಆದ್ರ್ರಾದರ್ಶನದ ಮಂಗಳದ ದಿನ, ೧೮೭೯ನೇ ಡಿಸೆಂಬರ್ ೩೦ ರ ರಾತ್ರಿ ೧ ಗಂಟೆಯ ತುಲಾ ಲಗ್ನದ ಪವಿತ್ರಗಳಿಗೆಯಲ್ಲಿ ಅಲಗಮ್ಮಾಳ್‌ರ ಗರ್ಭ ಸುಧಾಂಬುಧಿಯಿಂದ ಪುತ್ರರತ್ನವೊಂದು ಜನಿಸಿತು.

ಅದೇ ದಿನ ಊರಿನಲ್ಲೆಲ್ಲ ದೊಡ್ಡಹಬ್ಬ. ಊರಿಗೆ ಊರೇ ಸಂತಸದಲ್ಲಿ ತೇಲುತ್ತಿತ್ತು. ಧರ್ಮಜೀವಿಗಳು ವೇದಘೋಷ ಮಾಡುತ್ತ ಪರಮೇಶ್ವರನ ಉತ್ಸವದಲ್ಲಿ ಲೀನವಾಗಿದ್ದರು. ಹಿಂದಿನ ದಿನವೇ ಜಗದೊಡೆಯನಾದ ಪರ ಮೇಶ್ವರ ಅಂಧಕಾಸುರನನ್ನು ಮರ್ದಿಸಿದ ದಿವಸವಾಗಿತ್ತು. ಇಂಥ ಮಂಗಳ ಮಹೋತ್ಸವದ ಕಾಲದಲ್ಲೇ ಮುಂದೆ ಮಹರ್ಷಿಗಳೆಂದು ಖ್ಯಾತಿ ಪಡೆಯ ಬೇಕಾಗಿದ್ದ ರಮಣರ ಮಹೋದಯವಾಯಿತು—'ಕತ್ತಲೆಯ ಮನೆಗೆ ಮಣಿ ದೀಪವಾದಂತೆ'—ಆಯಿತು ಸುಂದರಂ ಅಯ್ಯರ್ ಸುಪುತ್ರನ ಜನನ.

## ೨

## ಮುಂಬೆಳಕು

ಮುದ್ದು ಮಗು ಬಹಳ ಆಕರ್ಷಕವಾಗಿತ್ತು. ತೇಜಃಪುಂಜ ನಯನ ಯುಗ್ಮ, ವಿಶಾಲವಾದ ಹಣೆ, ಸಂಪಿಗೆಯ ಹೂವಿನಂತೆಸೆಯುವ ನಾಸಿಕ, ನೀಳವಾದ ಬಾಹುಗಳು, ಎಲ್ಲ ನೇತ್ರಾಕರ್ಷಕ. ನೋಡಿದವರ ಕಣ್ಣುಗಳು ತಣಿಯುತ್ತಿದ್ದವು.

ಮಗುವಿಗೆ ತಂದೆ-ತಾಯಿಗಳು 'ವೆಂಕಟರಮಣ' ಎಂದು ನಾಮಕರಣ ಮಾಡಿದರು.

ವೆಂಕಟರಮಣ ಹುಟ್ಟುವ ಪೂರ್ವ ಆತನಿಗೊಬ್ಬ ಅಣ್ಣ ಜನಿಸಿದ್ದ. ಅವನ ಹೆಸರು ನಾಗಸ್ವಾಮಿ. ವೆಂಕಟರಮಣನಿಗೆ ಓರ್ವ ತಮ್ಮ ಅನಂತರ ದೊರೆತ. ಆತನೇ ನಾಗಸುಂದರಂ.

ಈ ಮೂವರಲ್ಲಿ ತ್ಯಾಗಮೂರ್ತಿಯಾಗಿ ಆತ್ಮವನ್ನು ಅರಿತು ವಿಶ್ವದ ಆಧ್ಯಾತ್ಮ ಚರಿತ್ರೆಯಲ್ಲೇ ನವೋದಯವನ್ನು ತಂದವನೇ ವೆಂಕಟರಮಣ. ಈತನೇ 'ರಮಣ ಮಹರ್ಷಿ' ಎಂದು ಪ್ರಖ್ಯಾತನಾದ ಮಹಾನುಭಾವ. ಸನಾತನ ಧರ್ಮದ ನಂದಾದೀಪವಾಗಿ ಬೆಳಗಿದ.

ರಮಣ ಮಹರ್ಷಿಗಳ ಜೀವನದ ಪ್ರತಿಯೊಂದು ಅಂಶವೂ ಸೋಜಿಗದಿಂದ ಕೂಡಿದೆ.

'ಬೆಳೆಯುವ ಮರವನ್ನು ಮೊಳಕೆಯಲ್ಲೇ ನೋಡು' ಎಂಬ ಒಂದು ಕನ್ನಡ ಗಾದೆಯನ್ನು ಈ ಸಂದರ್ಭದಲ್ಲಿ ಜ್ಞಾಪಿಸಿಕೊಳ್ಳಬೇಕು.

'ಎಷ್ಟು ತುಂಟನಮ್ಮ ಇವನು ? ಎಲ್ಲರ ಹಾಗೆ ಇವನು ಎಂದು ಶಾಂತಿಯಿಂದ ಜೀವನ ಕಳೆಯುತ್ತಾನೋ ?' ಎಂದು ತಾಯಿ ಅಲಗಮ್ಮಾಳ್ ಚಿಂತಿಸುತ್ತಿದ್ದರು. ಅವರ ಚಿಂತೆಗೆ ಕಾರಣವೂ ಇತ್ತು.

ವೆಂಕಟರಮಣ ಬಾಲ್ಯದಲ್ಲಿ ಭಾರಿ ತುಂಟನಾಗಿದ್ದ. ಅವನು ಹತ್ತದ ಮರವಿಲ್ಲ; ಸುತ್ತದ ಬೀದಿ ಇಲ್ಲ; ಈಜದ ಕೊಳವಿಲ್ಲ; ಏರಿ ಇಳಿಯದ ಬೆಟ್ಟ

ವಿಲ್ಲ; ಆಡದ ಆಟಪಾಟಗಳಿಲ್ಲ. ಬಾಲಕ ಇಷ್ಟು ತುಂಟನಾದರೂ ಮನೆಯ ಮುಂದೆಯೇ ಇದ್ದ ಭೂಮಿನಾಥೇಶ್ವರನ ಪೂಜೆಗೆ, ದರ್ಶನಕ್ಕೆ ದಿನವೂ ತಪ್ಪದೆ ಹೋಗುತ್ತಿದ್ದ. ತನ್ನ ಗೆಳೆಯರನ್ನೆಲ್ಲ ಗುಂಪು ಕಟ್ಟಿಕೊಂಡು ಗುಡಿಯಲ್ಲಿ ಭಜನೆ ನಡೆಯಿಸುತ್ತಿದ್ದ. ಭಗವಂತನ ಪೂಜೆಯಿಂದ ಆನಂದಿಸುತ್ತಿದ್ದ. ಇಷ್ಟೆಲ್ಲ ಆದರೂ ಅವನ ಕಣ್ಣುಗಳಲ್ಲಿ ಯಾರಿಗೂ ಗೋಚರಿಸದ ಚಂಚಲತೆ ಜಾಗ್ರತ ವಾಗಿತ್ತು. ಆಕಾಶವನ್ನು ನೋಡಿದನೆಂದರೆ, ನಿರಭ್ರವಾದ ಮೋಡಗಳ ಯಾನವನ್ನು ಕಂಡನೆಂದರೆ, ದಿವ್ಯ ಪ್ರಭಾತವನ್ನು ನಿರುಕಿಸಿದನೆಂದರೆ ಸ್ವೈಮರೆಯುತ್ತಿದ್ದ. ಬೆಳುದಿಂಗಳು, ತಾರೆಗಳು, ಪಶುಪಕ್ಷಿಗಳು, ಹಸಿರು ಗದ್ದೆಗಳು, ಪಚ್ಚೆಪೈರುಗಳು, ಗಿಡಮರಗಳು, ಹೂ ಹಣ್ಣುಗಳು ಅವನ ಹೃದಯದಲ್ಲಿ ಆನಂದದ ತೆರೆಗಳನ್ನೆಬ್ಬಿಸುತ್ತಿದ್ದುವು. ಎಷ್ಟೋಬಾರಿ ನೆಟ್ಟ ನೋಟದಿಂದ ಮುಗಿಲನ್ನೇ ನೋಡುತ್ತ ಕುಳಿತು ಬಿಡುವನು. ಅವನ ಪುಟ್ಟ ತಲೆಯಲ್ಲಿ ಏನೇನೋ ಭಾವನೆಗಳು ಸುಳಿಯುವುವು. ಅವನಿಗೇ ಗೋಚರಿಸದ ವಿಚಿತ್ರಾನುಭವವಾಗುತ್ತಿತ್ತು.

ಅಲಗಮ್ಮಾಳ್-ಸುಂದರಂ ಅಯ್ಯರಿಗೆ ವೆಂಕಟರಮಣ ಅಚ್ಚುಮೆಚ್ಚಿನ ಕುವರನಾಗಿದ್ದನು. ಅವನ ಮುಖದಲ್ಲಿ ಸರ್ವದಾ ನಗೆ ಹೂ ಅರಳಿರುತ್ತಿತ್ತು.

'ನನ್ನ ಕಂದನಿಗೆಲ್ಲಿ ದೃಷ್ಟಿತಾಕುತ್ತದೋ' ಎಂದು ಅಲಗಮ್ಮಾಳ್ ಎಷ್ಟೋಬಾರಿ ಅಂದುಕೊಂಡಿರಬೇಕು. ಆದರೆ, ಲೋಕದ ದೋಷದೃಷ್ಟಿಯನ್ನು, 'ವಿಶ್ವದ ಕಣ್ಣಿಗೆ' ಕವಿದ ಕತ್ತಲನ್ನು ಹೋಗಲಾಡಿಸಲು ಬಂದ 'ಲೋಕ ತಾರಕ'ನಿಗೆಲ್ಲಿಯ 'ದೃಷ್ಟಿ'ಯ ಭಯ! ಎಂಬುದನ್ನು ಆ ತಾಯಿ ಆಗೆಂತು ಅರಿಯಬಲ್ಲಳು?

ಮಗನು ಓದಬೇಕೆಂದು ಸ್ವಾಭಾವಿಕವಾಗಿಯೇ ತಂದೆ-ತಾಯಿಗಳು ಬಯಸಿದರು. ವೆಂಕಟರಮಣನನ್ನು ತಿರುಚ್ಚುಳಿಯಲ್ಲಿಯೇ ಪ್ರಾಥಮಿಕ ಶಾಲೆಗೆ ಸೇರಿಸಿದರು.

ಸರಿ, ಶಾಲೆಯ ಓದಿಗೆ ಮೊದಲಾಯಿತು. 'ಜೀವವಿಲ್ಲದ ಓದು' ಎಂದು ಆಗಲೇ ವೆಂಕಟರಮಣನಿಗೆ ಅತ್ಮ ಮಿಡಿಯಿತು. ಆತನ ನೈಜ ಶಿಕ್ಷಣಾಲಯ ವಿದ್ದುದು ಆತನ ಪೂಜ್ಯ ತಾಯಿಯ ಮಡಿಲಲ್ಲಿ.

ಮನೆಯಲ್ಲಿ 'ನಿಚ್ಚ ಶಿವರಾತ್ರಿ' ಪುರಾಣ ಪುಣ್ಯಕಥೆಗಳ ಪವಿತ್ರಶ್ರವಣ. ರಾಮಾಯಣ ಮಹಾಭಾರತಾದಿಗಳ ಪಠನ. ದಾಸವರ್ಯರ ಕರ್ಣಾನಂದ ಕರ ಪದ್ಯಗಳ ಹಾಡಿಕೆ. ದೇವತಾರ್ಚನೆ. ದಾನಧರ್ಮಾದಿಗಳು ಅಖಂಡ ವಾಗಿ ನಡೆಯುವ 'ದಾಸೋಹ'. ಬಂದ ಅತಿಥಿಗಳನ್ನು ಅತ್ಯಾದರದಿಂದ 'ಶಿವ ಸ್ವರೂಪಿ'ಗಳೆಂದು ಬರಮಾಡಿಕೊಳ್ಳುವ ಮಾತಾಪಿತೃಗಳ ಭಕ್ತಿಯ ಸೇವೆ. ಇವು ವೆಂಕಟರಮಣನ ಮನಸ್ಸನ್ನು ಸೂರೆಗೊಂಡವು. ಆ ಎಳೆಯ ಮನಸ್ಸನ್ನು ಹದಗೊಳಿಸಿದವು. ಎಂದಿಗೂ ಮರೆಯಲಾಗದ ಸತ್ಪರಿಣಾಮವನ್ನುಂಟು ಮಾಡಿದವು.

ಶಿವಾರಾಧನೆಯಲ್ಲಿ ವೆಂಕಟರಮಣನ ಮನಸ್ಸು ಎಷ್ಟೋಬಾರಿ ಲೀನ ವಾಗುವುದು- 'ತಾನೂ ತನ್ನ ತಂದೆಯಂತೆಯೇ ಆಗಬೇಕು' ಎಂದು ಆತನ ಮನಸ್ಸು ಹಂಬಲಿಸುವುದು. ಆದರೆ ಈ ಸಮಯದಲ್ಲಿ 'ಭಕ್ತಿಯ ಆವೇಶ' ಎಂದೂ ಕಂಡುಬರಲಿಲ್ಲ.

ದೇಹದಾರ್ಢ್ಯವನ್ನು ಬೆಳೆಯಿಸುವುದರ ಕಡೆಗೆ ವೆಂಕಟರಮಣನ ಮನಸ್ಸು ವಿಶೇಷವಾಗಿ ಹರಿಯಿತು. ಅವನು ಸೊಗಸಾಗಿ ಕುಸ್ತಿಮಾಡು ತ್ತಿದ್ದನು. ತನ್ನ ಭುಜಬಲ ತೋರಿಸಿ ಓರಿಗೆಯವರನ್ನು ಹೆದರಿಸುತ್ತಿದ್ದನು. ಇವನ ಶಕ್ತಿಯನ್ನರಿತ ಗೆಳೆಯರು ಇವನ ಮಾತಿಗೆ ಚಾಚೂ ತಪ್ಪುತ್ತಿರಲಿಲ್ಲ.

ವೆಂಕಟರಮಣನ ಪ್ರಾಥಮಿಕ ಶಿಕ್ಷಣ ತಮಿಳು ಭಾಷೆಯಲ್ಲಿ ತಿರುಚ್ಚುಳಿ ಯಲ್ಲಿ ಮೂರು ವರ್ಷಗಳ ಕಾಲ ನಡೆಯಿತು. ದಿಂಡಿಗಲ್ಲಿನಲ್ಲಿ ಒಂದು ವರ್ಷ ಇಂಗ್ಲೀಷು ಓದಿದನು. ಮುಂದಿನ ವಿದ್ಯಾಭ್ಯಾಸ ಮಧುರೆಯಲ್ಲಿ ಸಾಗಿತು. ಸ್ಕಾಟ್ಸ್ ಮಾಧ್ಯಮಿಕ ಶಾಲೆಯಲ್ಲಿ ಮಾಧ್ಯಮಿಕ ಶಿಕ್ಷಣ ದೊರೆಯಿತು.

ಶಾಲೆಯ ಓದು ಸಾಗಿಯೇ ಸಾಗಿತು. ವೆಂಕಟರಮಣನ ಮನಸ್ಸನ್ನು ಆ ಗಿಳಿಪಾಠ ಆಕರ್ಷಿಸಲಿಲ್ಲ. ಅವನ ಆಧ್ಯಾತ್ಮಿಕ ಪ್ರಪಂಚ ಪ್ರತಿನಿತ್ಯ ವಿಸ್ತಾರವಾಗುತ್ತ ಸಾಗಿತ್ತು. ಆತನ ಅಂತರ್ಜೀವನದಲ್ಲಿ ಮಹಾಬೆಳಕೊಂದು ಆವಿರ್ಭವಿಸುವ ಸಕಲ ಸಿದ್ಧತೆ ನಡೆದಿತ್ತು.

ವೆಂಕಟರಮಣ ಸಂಸ್ಕೃತ ಭಾಷೆಯನ್ನು ಕರತಲಾಮಲಕ ಮಾಡಿಕೊಳ್ಳಲಿಲ್ಲ. ಆಂಗ್ಲಭಾಷೆಯಲ್ಲಿ ನೈಪುಣ್ಯತೆ ಸಂಪಾದಿಸಲಿಲ್ಲ. ಮಾತೃಭಾಷೆಯಾದ ತಮಿಳಿನಲ್ಲಿಯೂ ಪಂಡಿತನೆನಿಸಲಿಲ್ಲ. ವ್ಯಾಕರಣವೆಂದರೆ ಅವನಿಗೆ ತಲೆ ಚಿಟ್ಟು ಹಿಡಿಸಿತ್ತು. ಬೀಜಗಣಿತ ಕಂಡರೆ ಅವನಿಗೆ ಅತಿ ಬೇಸರ.

ಅಂತೂ ಇಂತು ವೆಂಕಟರಮಣ ಮಧುರೆಯಲ್ಲಿನ ಮಿರ್ಷ ಹೈಸ್ಕೂಲ್ ಸೇರಿದ. ಆತನ ಜೀವನದಲ್ಲಿ ಇದೊಂದು 'ಸಾಹಸಯಾತ್ರೆ'.

ಹೈಸ್ಕೂಲಿನಲ್ಲಿ ಮನಸ್ಸುಕೊಟ್ಟು ಓದಿದನೇ ? ಇಲ್ಲ. ಬೆಳುದಿಂಗಳ ರಾತ್ರಿಯಲ್ಲಿ ವೆಂಕಟರಮಣ ಮನೆಬಿಟ್ಟು ಹೊರಕ್ಕೆ ಹೊರಟು ವಿಶಾಲ ವಿಶ್ವದ ಭಾವನೆಯಲ್ಲಿ, ತಂಗಾಳಿಯ ತೆರೆಯಲ್ಲಿ ತೇಲಾಡಿ, ಗೆಳೆಯರೊಂದಿಗೆ ವೈಗೈ* ನದಿಯಲ್ಲಿ ಮೂರು ನಾಲ್ಕುಗಂಟೆಗಳ ಕಾಲ ಈಜಾಡಿ, ಕಳ್ಳತನದಲ್ಲಿ ಹಾಗೆಯೇ ಮನೆಗೆ ಹಿಂತಿರುಗಿ ಬಂದು ಹಾಸಿಗೆಯ ಮೇಲೆ ಮಲಗಿ ಬಿಡುತ್ತಿದ್ದ. ನೋಡಿದವರಿಗೆ ಒಳ್ಳೆಯ ಹುಡುಗನ ಹಾಗೆಯೇ ಇರುತ್ತಿದ್ದ.

ಇನ್ನು ರಜಾಕಾಲ ಬಂದರಂತೂ ತೀರಿಯೇ ಹೋಯಿತು. ಗೆಳೆಯರೊಂದಿಗೆ ಸಂಚಾರ ಹೊರಟು ಪ್ರತಿಯೊಂದು ಗುಡ್ಡ ಬೆಟ್ಟಗಳನ್ನು, ದರಿ ಕಂದರಗಳನ್ನು, ನದೀ ನದಗಳನ್ನು ಸಂದರ್ಶಿಸಿ ಬರುತ್ತಿದ್ದ. ಗಂಡಾಂತರ ಸಮಯದಲ್ಲಿ ಪಾರಾಗುವ ಬಗೆ ಹೇಗೆ ಎಂದು ಮಿತ್ರರಿಗೆ ಉಪದೇಶಿಸುತ್ತಿದ್ದ

ವೆಂಕಟರಮಣನ ಈ ಜೀವನವನ್ನು ಕಂಡವರು ಮುಂದೆ ಈತನೊಬ್ಬ ಮಹಾ ಪುರುಷನಾಗುತ್ತಾನೆಂದು ಹೇಳುವ ಹಾಗೆಯೇ ಇರಲಿಲ್ಲ. ಅಷ್ಟು ತುಂಟು ಹುಡುಗನಾಗಿದ್ದ ಈ ವೆಂಕಟರಮಣ.

ವೆಂಕಟರಮಣನ ವ್ಯಕ್ತಿತ್ವದಲ್ಲೇ ಒಂದು ಅಭೂತಪೂರ್ವವಾದ ಆಕರ್ಷಕ ಶಕ್ತಿ ಮೂರ್ತಿವೆತ್ತಿತ್ತು. ಈತನನ್ನು ಅರೆಕ್ಷಣ ಅಗಲಿರುವುದು ಈತನ ಮಿತ್ರವೃಂದಕ್ಕೆ ಅಸಾಧ್ಯವಾಗಿತ್ತು. ಗೆಳೆಯರೆಲ್ಲರಲ್ಲಿ ಅಷ್ಟರಮಟ್ಟಿನ ಆತ್ಮೀಯತೆ ಬೆಳೆದು ನಿಂತಿತ್ತು. ದಿನದ ಆಟಪಾಟಗಳಲ್ಲಿ ನಡೆದ ಸೋಲಿನ ಘಟನಾ

---

*ದಕ್ಷಿಣ ಭಾರತದ ಪ್ರಸಿದ್ಧ ದೇವಾಲಯವಾದ ಮೀನಾಕ್ಷೀ ಸುಂದರೇಶನ ಮಂದಿರದಿಂದ ಶೋಭಿಸುವ ಮಧುರಾನಗರ, 'ವೈಗೈ' ಎಂಬ ನದಿಯ ದಡದಲ್ಲಿದೆ.

ಅವನ ಉದ್ವೇಗಕ್ಕೆ ಮಿತಿ ಇಲ್ಲವಾಯಿತು. ಅದೇ ಆವೇಗದಲ್ಲಿಯೇ ಅವನು 'ಏನು,ಅರುಣಾಚಲಂ ನಿಂವಲೇ!ಅದೆಲ್ಲಿದೆ?' ಎಂದು ಕೇಳಿದ. ವೆಂಕಟರಮಣನ ಭಾವಪರವಶತೆಯನ್ನು ಅರ್ಥಮಾಡಿಕೊಳ್ಳಲಾರದ ಆ ಬಂಧುಗಳು 'ಏನು ಅರುಣಾಚಲಂ ತಿಳಿಯದೆ! ಸುಕ್ಷೇತ್ರ ತಿರುವಣ್ಣಾಮಲೆಯೇ ಅರುಣಾಚಲಂ' ಎಂದು ಉತ್ತರವಿತ್ತರು. ಈ ಉತ್ತರ ವೆಂಕಟರಮಣನಿಗೆ ಯಾವ ತೃಪ್ತಿಯನ್ನೂ ಕೊಡಲಿಲ್ಲ. ಆದರೇನು? ಅವನ ಮುಂದಿನ ಮಹಾಜೀವನದ ಮುಂಬೆಳಕು ಆಗಲೇ ಮೂಡಿತ್ತು.



೩

## ಮಹಾ ಪರಿವರ್ತನೆ

೧೮೯೬ನೇ ಇಸವಿಯ ಜುಲೈ ತಿಂಗಳ ಮಧ್ಯಭಾಗ. ವೆಂಕಟರಮಣನ ಜೀವನದಲ್ಲಿ ಮುಂದೆ ಆಗಬೇಕಾಗಿದ್ದ ಮಹಾ ಪರಿವರ್ತನೆಯ ಸಕಲ ಸಿದ್ಧತೆಯೂ ರೂಪುಗೊಳ್ಳುತ್ತಲಿತ್ತು. ಈ ಸಮಯದಲ್ಲಿ ವೆಂಕಟರಮಣನು ಒಂದು ಅನಿರ್ವಚನೀಯವಾದ ಅನುಭವವನ್ನು ಕಂಡನು. ಆ ಅನುಭವವನ್ನು ಈ ರೀತಿ ಸಂಗ್ರಹಿಸಬಹುದು:-

"ಒಂದು ದಿನ ನನ್ನ ಚಿಕ್ಕಪ್ಪನವರ ಮಹಡಿಯ ಮೇಲೆ ಯೋಚನಾಪರವಶನಾಗಿ ಕುಳಿತಿದ್ದೆ. ಇದ್ದಕ್ಕಿದ್ದಂತೆ ನನ್ನನ್ನು ಸಾವಿನ ಸಮಸ್ಯೆ ಮುತ್ತಿತು. ನಾನು ಸಾಯುತ್ತೇನೆಂದು ಭಾಸವಾಯಿತು. ತಕ್ಷಣ ನನ್ನ ಮುಂದಿನ ಕರ್ತವ್ಯವೇನೆಂಬುದನ್ನು ಯೋಚಿಸಲಾರಂಭಿಸಿದೆ. ಈ ಸಮಯದಲ್ಲಿ ನಾನು ವೈದ್ಯರನ್ನಾಗಲಿ, ಬಂಧು ಬಳಗದವರನ್ನಾಗಲಿ ಏನು ಮಾಡಬೇಕೆಂಬ ಬಗ್ಗೆ ವಿಚಾರಿಸುವ ಗೋಜಿಗೆ ಹೋಗಲಿಲ್ಲ. ಎದುರಿಗೆ ಬಂದ ಈ ಸಾವಿನ ಸಮಸ್ಯೆಯನ್ನು ನಾನೇ ಬಿಡಿಸಬೇಕು ಎಂದು ನಿರ್ಧರಿಸಿದೆ. ಮರಣ ಭಯ ನನ್ನನ್ನು ಅಂತರ್ಮುಖಿಯನ್ನಾಗಿ ಮಾಡಿತು. ನಾನೇನೂ ನುಡಿಯಲಿಲ್ಲ. ಮನಸ್ಸಿನಲ್ಲಿ ತುಮುಲಯುದ್ಧಕ್ಕಾರಂಭವಾಯಿತು. ನನ್ನ ಮುಂದೆ ಅನೇಕ ಪ್ರಶ್ನೆಗಳು ಬಂದುನಿಂತವು. ಸಾವು ಎಂದರೇನು ? ಸಾಯುವವರು ಯಾರು ? ಸಾಯುವುದು ಈ ದೇಹವೆ? ಹುಟ್ಟಿಗೆ ಮೊದಲು ನಾನೆಲ್ಲಿದ್ದೆ? ಸತ್ತಮೇಲೆ ಹೋಗುವುದೆಲ್ಲಿ? ಮೊದಲಾದ ಅಂಶಗಳಿಗೆ ನನ್ನಷ್ಟಕ್ಕೆ ನಾನೇ ಒಂದು ಕಾಲ್ಪನಿಕ ರೂಪುಕೊಟ್ಟು ಅದರ ವಿಭಜನೆಗೆ ಆರಂಭಿಸಿದೆ.

"ಕೂಡಲೇ ನನ್ನ ದೇಹವನ್ನು ಶವದೋಪಾದಿಯಲ್ಲಿ ಭಾವಿಸಿ, ಕೈಕಾಲುಗಳನ್ನು ನೀಳವಾಗಿ ಚಾಚಿ ಉಸುರನ್ನು ಬಿಡದೆ ಗಟ್ಟಿಯಾಗಿ ಹಿಡಿದು ತುಟಿಗಳನ್ನು ಬಲವಾಗಿ ಅಮುಕಿ ಮಾತನಾಡುವುದು ಸಾಧ್ಯವೇ ಇಲ್ಲದಹಾಗೆ ಮಾಡಿದೆ. ನನ್ನ ದೇಹ ಸತ್ತಿದೆ. ಇದನ್ನೀಗ ಮಸಣಕ್ಕೆ ಹೊತ್ತೊಯ್ಯುತ್ತಾರೆ. ಸುಟ್ಟು ಭಸ್ಮಮಾಡುತ್ತಾರೆ.

"ಎಲ್ಲ ಸರಿಯೇ! ಆದರೆ ಈಗ ಸತ್ತವರು ಯಾರು? ಭಸ್ಮವಾದ 'ದೇಹವೇ'? ಅಥವಾ 'ನಾನೇ'? ಸಾವಿನೊಂದಿಗೆ 'ನಾನೂ' ಸತ್ತುಹೋದಂತಾಯಿತೇ? 'ನಾನು' ಅಂದರೆ ಶರೀರವೇ?. ಶರೀರಕ್ಕೆ ಸ್ವಯಂ ಚೈತನ್ಯವಿಲ್ಲ. ಆದರೆ, ನನ್ನ ಶಕ್ತಿಸ್ವರೂಪವನ್ನು ನಾನು ಬಲ್ಲೆ. ಅಂದಮೇಲೆ 'ನಾನು' ಶರೀರವನ್ನು ಚೈತನ್ಯಾತ್ಮಕವನ್ನು ಮಾಡುವ 'ವಿಶಿಷ್ಟಶಕ್ತಿ'ಎಂದಂತಾಯಿತು' ನಶ್ವರ ಶರೀರವು ಮೃತಿಹೊಂದಿದರೂ ಅದಕ್ಕೆ ಚೈತನ್ಯ ಸ್ವರೂಪವಾದ ವಿಶಿಷ್ಟ ಶಕ್ತಿಯನ್ನು ಸಾವು ಸೋಂಕದು. ಈ ಸಮಸ್ಯೆಗಳೆಲ್ಲ ನನಗೆ ಸತ್ಯಸ್ವರೂಪವಾಗಿ ಕಂಡವು.

'ನಾನು' 'ನಿತ್ಯ ಸತ್ಯ'ವಾಗಿ ತೋರಿದೆ. ನನ್ನ ದೈಹಿಕ ಕ್ರಿಯೆಗಳೆಲ್ಲವೂ 'ನಾನು' ಎಂಬ ಚೈತನ್ಯಾತ್ಮಕ ಕೇಂದ್ರದ ಮೂಲಕ ನಡೆಯುತ್ತವೆಂಬುದು ನನಗೆ ಗೋಚರವಾಯಿತು. ಮರುಕ್ಷಣವೇ ನನ್ನನ್ನು ಆವರಿಸಿದ್ದ ಮರಣ ಭಯ ಕಣ್ಮರೆಯಾಯಿತು. ಅಂದಿನಿಂದ 'ಮರಣದ ಭಯ' ನನ್ನನ್ನು ಮತ್ತೆ ಸೋಂಕಿಲ್ಲ."



ಇಲ್ಲಿಂದ ಮುಂದೆ ಜಿಜ್ಞಾಸು ವೆಂಕಟರಮಣನ ಜೀವನ ವಿಧಾನವೇ ಬದಲಾಯಿಸಿತು. ಪುಸ್ತಕದ ಓದಿನಲ್ಲಿ ಆತನ ಆಸಕ್ತಿ ದಿನೇದಿನೇ ಕುಂದುತ್ತಲೇ ಬಂತು. ಅಕಸ್ಮಾತ್ತಾಗಿ ಓದಿದರೆ ಅದು ಕಾಟಾಚಾರಕ್ಕೆ, ಹಿರಿಯರ ತೃಪ್ತಿಗೆ. ವೆಂಕಟರಮಣನಲ್ಲಿ ಬಾಲ್ಯದಲ್ಲಿದ್ದ ದುಡುಕು ಮಾಯವಾಗಿತ್ತು. ಶಾಂತಿಗೆ ಆವನು ಮನಸೋತಿದ್ದ. ಇತರರನ್ನು ಕಾಣುವುದರಲ್ಲಿ ಅಂತಃಕರಣ ಉಕ್ಕುತ್ತಿತ್ತು. ಕರುಣೆ ಹೊಮ್ಮುತ್ತಿತ್ತು. ಆಟಪಾಟಗಳಲ್ಲಿನ ಆಸಕ್ತಿ ಮರೆಯಾಯಿತು. ಏಕಾಂಗಿಯಾಗಿರುವುದರಲ್ಲಿ ಹೆಚ್ಚಿನ ಮಮತೆ ತಲೆದೋರಿತು. ಸರಿ, ವೆಂಕಟರಮಣ ಧ್ಯಾನಾಸಕ್ತನಾಗತೊಡಗಿದ. ತಿಂಡಿ ತಿನಸುಗಳ ಮೇಲಿನ ಆಸೆ ಅಳಿಯಿತು. ವೆಂಕಟರಮಣನ ಈ ನಿರಾಸಕ್ತಿ ಮನೆಯವರ ಅಣಕಕ್ಕೆ ಎಡೆ ಇತ್ತಿತು. ಎಷ್ಟೋಬಾರಿ ಈತನನ್ನು "ಋಷಿಪುಂಗವ, ಯೋಗಿನಾಥ,ಮಹರ್ಷಿ ಅಯ್ಯಾ ನೀನು ಕಾಡಿಗಾದರೂ ಹೋಗಿ ಗೊಡ್ಡು ಸಂನ್ಯಾಸಿಯಾದರೂ ಆಗಬಾರದೇ?"ಮುಂತಾಗಿ ಬಂಧುಮಿತ್ರರು ರೇಗಿಸಿದರು. ಆದರೆ

ಈ ಅಣಕವನ್ನೆಲ್ಲ ವೆಂಕಟರಮಣ ಶಾಂತಿಯಿಂದ ಸಹಿಸಿಕೊಂಡಿದ್ದನು.
ಗಂಭೀರವಾಗಿ ರಾಜಬೀದಿಯಲ್ಲಿ ಹೋಗುವ ಆನೆ ಅಕ್ಕಪಕ್ಕದ ಪ್ರಾಣಿಗಳ
ಗಡಿಬಿಡಿಗೆ ಗಮನ ಕೊಡುವುದೇ ?.

೧೮೯೬ನೆಯ ಆಗಸ್ಟ್ ೨೯ನೆಯ ಶನಿವಾರ. ಎಂದಿನಂತೆ ವೆಂಕಟ
ರಮಣನು ಶಾಲೆಗೆ ಹೋದನು. ಯಾಂತ್ರಿಕವಾಗಿ ಅವನ ಪಾಠ ಸಾಗಿತ್ತು.
ಮೆಟ್ರಿಕ್ಯುಲೇಷನ್ ಪರೀಕ್ಷೆ ಬೇರೆ ಸಮೀಪಿಸಿತ್ತು. ಅವನ ಶಾಲೆಯ ಅಧ್ಯಾಪಕರು
ಬೆಯಿನ್ ವ್ಯಾಕರಣವನ್ನು ಗಟ್ಟಿಮಾಡಲು ಕೊಟ್ಟಿದ್ದರು. ವೆಂಕಟರಮಣ
ನಿಗೆ ಅದು ಸಾಧ್ಯವಾಗಿರಲಿಲ್ಲ. ಅದಕ್ಕಾಗಿ ಒಂದೇಪಾಠವನ್ನು ಮೂರುಸಲ
ಬರೆಯಬೇಕೆಂದು ಅವನ ಗುರುಗಳ ಕಟ್ಟಾಜ್ಞೆಯಾಯಿತು.

ವೆಂಕಟರಮಣ ಮನೆಗೆ ಬಂದು ಮಹಡಿಯ ಮೇಲೆ ಕುಳಿತು ಪಾಠ
ಬರೆದುಕೊಳ್ಳುವುದರಲ್ಲಿ ಲೀನವಾಗಿದ್ದ. ಆಗಲೇ ಎರಡುಸಲ ಬರೆದದ್ದಾಗಿತ್ತು.
ಮೂರನೆಯ ಸಲ ಬರೆಯುವ ಸಮಯದಲ್ಲಿ 'ಇದೇನು ಗ್ರಹಚಾರ ಬರೆದ
ದ್ದನ್ನೇ ಮತ್ತೆ ಮತ್ತೆ ಬರೆಯುವುದು ?' ಎಂದು ಬೇಸರಪಟ್ಟುಕೊಂಡ. ಆ
ಬೇಸರ ಪುಸ್ತಕವನ್ನು ಮೂಲೆಗೆಸೆಯುವಂತೆ ಮಾಡಿತು. ಬಂದ ಬೇಸರ
ನೀಗಲು ಅವನು ಎಂದಿನಂತೆ ಕಣ್ಮುಚ್ಚಿ ಧ್ಯಾನಾಸಕ್ತನಾಗಿ ಸ್ವಲ್ಪಕಾಲ ಇಹ
ಜಗತ್ತನ್ನು ಮರೆತನು.

ಇದೇ ಸಮಯಕ್ಕೆ ಸರಿಯಾಗಿ ಅರುಣಾಚಲೇಶ್ವರನ ಅಪ್ರತ್ಯಕ್ಷ ಪ್ರತಿ
ನಿಧಿಯಾಗಿ ವೆಂಕಟರಮಣನ ಅಣ್ಣ ನಾಗಸ್ವಾಮಿಯು ತಮ್ಮನ ವಿದ್ಯಾಭ್ಯಾಸವು
ಹೇಗೆ ಸಾಗಿದೆಯೆಂದು ನೋಡಲು ಮಹಡಿಯ ಮೇಲೇರಿ ಬಂದನು. ಧ್ಯಾನಾ
ಸಕ್ತನಾಗಿದ್ದ ವೆಂಕಟರಮಣನನ್ನು ನೋಡಿ ತಡೆಯಲಾರದೆ ನಾಗಸ್ವಾಮಿ
ವ್ಯಂಗ್ಯವಾಗಿ "ಋಷಿಯಾಗಬೇಕಾದವನು ಪ್ರಪಂಚದ ಸಾಮಾನ್ಯ ವ್ಯವಹಾ
ರಗಳನ್ನೇತಕ್ಕೆ ಅಂಟಿಸಿಕೊಳ್ಳಬೇಕು ? ಈ ನಟನೆ ಏತಕ್ಕೆ" ಎಂದು ನುಡಿ
ದನು. ಅವನ ಮಾತು ಅಲಗಿನಂತೆ ಹರಿತವಾಗಿತ್ತು. ಮಲ್ಲಿಗೆಯ ಹೂವಿ
ನಂತಿದ್ದ ವೆಂಕಟರಮಣನ ಮನಸ್ಸು ಅಣ್ಣನ ಬಿರುಮಾತಿನ ಮಾತಿಗೆ ಕರ್ರನೆ
ಕಂದಿತು. ಚಿಂತೆ ಆವರಿಸಿತು. ಮನಸ್ಸು ಅಲ್ಲೋಲ ಕಲ್ಲೋಲವಾಯಿತು.

ವೆಂಕಟರಮಣನಿಗೆ ಇದೇ ರೀತಿಯ ಮರ್ಮಭೇದಕ ಮಾತುಗಳು ಅನೇ ದಿನಗಳಿಂದ ಮನೆಯವರಿಂದ ಕೇಳಿ ಬರುತ್ತಲಿದ್ದವು. ಆದರೆ ಅವನು ಅಷ್ಟಾ ಗಮನಿಸಿರಲಿಲ್ಲ. ಅಣ್ಣನ ಇಂದಿನ ಮಾತು ಅವನನ್ನು ಹೊಡೆದೆಬ್ಬಿಸಿತು. ಪ್ರಶ್ನೆಯ ಬಗ್ಗೆ ಎಂದೂ ಯೋಚಿಸದವನು ಆ ಕ್ಷಣದಲ್ಲೇ ಆಳವಾದ ಆಲೋ ಚನೆಗೆ ಆರಂಭಿಸಿದ. ಅಣ್ಣನ ಮಾತಿನ ಹಿಂದಿನ ನಗ್ನಸತ್ಯವನ್ನರಿತನು 'ನನಗೆ ಕೆಲಸವಾದರೂ ಏನಿಲ್ಲಿ ? ಅಣ್ಣ ಹೇಳುವುದು ಸತ್ಯವೇ. ಎಷ್ಟು ದಿ ತಾನೆ ಇದೇ ರೀತಿ ಬಾಳನ್ನು ನೂಕುವುದು?' ಎಂದು ಯೋಚಿಸಿದ. ಮರುಕ್ಷಣ ದಲ್ಲಿಯೇ ಅರುಣಾಚಲದ ನೆನಪಾಯಿತು. ಮೈ ರೋಮಾಂಚನಗೊಂಡಿತು. ವೆಂಕಟರಮಣನಲ್ಲಿ ಅವ್ಯಕ್ತವಾಗಿ ರೂಪುಗೊಳ್ಳುತ್ತಲಿದ್ದ ಮಹಾ ಪರಿವರ್ತ ನೆಗೆ ಈ ಘಟನೆ ಪೂರಕವಾಯಿತು.

ಅಗೋಚರವಾದ ಅರುಣಾಚಲದ ಶಕ್ತಿಯೊಂದು ಸಾಧಕನನ್ನು ಕೈಬೀಸಿ ಕರೆಯಿತು. ಸೂಜಿಯನ್ನು ಸೂಜಿಗಲ್ಲು ಆಕರ್ಷಿಸಿದಂತಾಯಿತು.



೪

## ಮಹಾಯಾತ್ರೆ

ಅಣ್ಣ ನಾಗಸ್ವಾಮಿ ಆಡಿದ ಮಾತು ವೆಂಕಟರಮಣನ ಕಿವಿಯಲ್ಲಿ ಒಂದೇ ಸಮನೆ ಗುಡು ಗುಡು ಎಂದು ಪ್ರತಿಧ್ವನಿಸುತ್ತಿತ್ತು. ಈ ಜಡ ಪ್ರಪಂಚದಿಂದ ಒಮ್ಮೆ ಪಾರಾಗಿ ಪವಿತ್ರ ಕ್ಷೇತ್ರಕ್ಕೆ ಕಾಲಿಡಬೇಕೆಂದು ಅವನ ಕದಡಿದ ಮನಸ್ಸು ಹಾತೊರೆಯುತ್ತಿತ್ತು. ಮತ್ತೆ ಈ ಬಂಧನಕ್ಕೆ ಸಿಲುಕದಂತೆ ಮಾಡಲು ಕೈಕೊಳ್ಳಬೇಕಾದ ಉಪಾಯವನ್ನು ಅವನು ಪ್ರದೀರ್ಘವಾಗಿ ಚಿಂತಿಸತೊಡಗಿದನು. ಭವಮಾಲೆಯ ಕೊಂಡಿಯನ್ನು ಕಳಚುವ ಹಾದಿಯನ್ನು ಹುಡುಕ ತೊಡಗಿದನು.

ಇದ್ದಕ್ಕಿದ್ದಂತೆಯೇ ಅವನಿಗೆ ಶಾಲೆಯಲ್ಲಿ ಗುರುಗಳು ಕೊಟ್ಟ ಪಾಠದ ಕಡೆಗೆ ಗಮನ ಹರಿಯಿತು.'ಅಣ್ಣಾ, ನಾನು ಮಧ್ಯಾಹ್ನ ಶಾಲೆಗೆ ಹೋಗಬೇಕು" ಎಂದ ವೆಂಕಟರಮಣ.

'ಏತಕ್ಕೆ ?'

'ಈ ದಿನ ವಿದ್ಯುಚ್ಛಕ್ತಿಯ ಬಗ್ಗೆ ವಿಶೇಷ ಪಾಠವುಂಟು.'

'ಹಾಗಾದರೆ ಹಾಗೆಯೇ ನನ್ನದೊಂದು ಕೆಲಸಮಾಡಿ ಕೊಡುತ್ತೀಯಾ?'

'ಅಗತ್ಯವಾಗಿ'

'ಅಂಥ ದೊಡ್ಡ ಕೆಲಸವೇನಲ್ಲ. ನಾನು ಕಾಲೇಜು ಫೀಜು ಕೊಡಬೇಕಾಗಿದೆ. ಕಾಲೇಜು ನಿನ್ನ ಶಾಲೆಯ ಪಕ್ಕದಲ್ಲಿಯೇ ಇದೆ. ಹಾಗೆಯೇ ಹೋಗುವಾಗ ಹಣ ಕಟ್ಟಿಬಿಡು.'

'ಹಾಗಾದರೆ ದುಡ್ಡು ಕೊಡುತ್ತೀಯಾ? ಎಷ್ಟು ಕಟ್ಟಬೇಕು?'

"ಆ ಚಿಂತೆ ನಿನಗೆ ಬೇಡ. ನಾನು ಐದು ರೂಪಾಯಿ ಕಟ್ಟಬೇಕಾಗಿದೆ. ಕೆಳಗಿನ ಪೆಟ್ಟಿಯಲ್ಲಿ ಐದು ರೂಪಾಯಿಗಳಿವೆ. ತೆಗೆದುಕೊಂಡು ಹೋಗು" ಎಂದು ನಾಗಸ್ವಾಮಿ ಹೇಳುವುದೊಂದೇ ತಡ ವೆಂಕಟರಮಣ ಗಂಭೀರವಾಗಿ ಪೆಟ್ಟಿಲನ್ನಿಳಿಯ ತೊಡಗಿದನು.

'ವೆಂಕಟರಮಣ ಊಟವಾಗಿದೆಯೋ ?'

'ಇನ್ನೂ ಇಲ್ಲ.'

'ಊಟ ತೀರಿಸಿಕೊಂಡು ಹೋಗು. ಬರುವುದು ಎಷ್ಟು ಹೊತ್ತಾಗುತ್ತದೋ ಏನೋ ?'

ವೆಂಕಟರಮಣನಿಗೆ ಮಾತಿನ ಕಡೆಗೆ ಗಮನವಿರಲಿಲ್ಲ. ಅವನು ಮಿಂಚಿ ವೇಗದಲ್ಲಿ ಮೆಟ್ಟಲುಗಳನ್ನಿಳಿದು ಭೋಜನ ಶಾಲೆಗೆ ಬಂದು ಆದೇ ಬಡಿಸಿ ಸಿ ವಾಗಿದ್ದ ಎಲೆಯಮುಂದೆ ಕುಳಿತ. ಆವನ ಮುಖ ಮುದ್ರೆಯಲ್ಲಿ ಎಂದಿನ ಸ ಮಿಂಚು ಕಾಣುತ್ತಿರಲಿಲ್ಲ. ತೀರ ಭಾವನಾವಶನಾಗಿದ್ದಂತೆ ತೋರುತ್ತಿತ್ತು ಕಣ್ಣಾಲಿಯಲ್ಲಿ ನೀರು ಮೈವೆತ್ತಿತ್ತು. ಕಾಂತಿ ಕಂಗೊಳಿಸುತ್ತಿತ್ತು.

ಊಟಕ್ಕೆ ಬಡಿಸಲೆಂದು ನಿಂತಿದ್ದ ಚಿಕ್ಕಮ್ಮ ವೆಂಕಟರಮಣನನ್ನು ನೋ ದರು. ಅವನಲ್ಲಿ ತೋರಿಬಂದ ಬದಲಾವಣೆಯನ್ನು ನೋಡಿ ತವಕಗೊಂಡ ಸರ್ವದಾ ಉತ್ಸಾಹ ಶಾಲಿಯಾಗಿರುವವನು ಇಂದು ಹೀಗೇಕಿದ್ದಾನೆ ? ಎಂ ತಮ್ಮಷ್ಟಕ್ಕೆ ತಾವೇ ಪ್ರಶ್ನಿಸಿಕೊಂಡರು. ಬಗೆ ಹರಿಯಲಿಲ್ಲ. ವೆಂಕಟರಮ ನನ್ನು ಮಾತನಾಡಿಸಿ ಕುಶಲ ಪ್ರಶ್ನೆ ಕೇಳಿ ಕಾರಣವನ್ನರಿಯಬೇಕೆಂ ಮನಸ್ಸು ಹಾತೊರೆದರೂ ಅದೇಕೋ ಮಾತು ಹೊರಡದಾದುವು.

ವೆಂಕಟರಮಣನ ಕಣ್ಣುಗಳು ದುಃಖದ ಆವೇಶದಿಂದ ಕೆಂಪಗಾಗಿದ್ದುವ ಕಣ್ಣೀರು ಹನಿಹನಿಯಾಗಿ ಉದುರುತ್ತಿತ್ತು. ಅವನಿಗೂ ಆಗ ಮಾತು ಬೇ ವಾಗಿತ್ತು.

'ಏಕೆ ವೆಂಕಟರಮಣ, ಹೀಗಿದ್ದೀಯೆ ?'

ವೆಂಕಟರಮಣ ಉತ್ತರಿಸಲಿಲ್ಲ.

'ಸ್ಕೂಲಿಗೆ ಹೊತ್ತಾಯಿತೆ ?'

ಮತ್ತೂ ಉತ್ತರವಿಲ್ಲ.

'ಅದೇತಕ್ಕೆ ಕಣ್ಣಿನಲ್ಲಿ ನೀರು ? ಅಂಥ ದುಃಖವಾದರೂ ಏನು ? ನ ಮುಂದೆ ಹೇಳಬಾರದೆ ? ಎಂದೂ ಈರೀತಿ ಕಣ್ಣಿನಲ್ಲಿ ನೀರು ತಾರದವ

ಇಂದೇಕೆ ಈರೀತಿ ಇರುವೆ ? ನಿನ್ನಲ್ಲಿ ಏನೋ ಮಹಾ ಪರಿವರ್ತನೆಯಾದಂತೆ ಕಾಣುತ್ತಿದೆ. ವೆಂಕಟರಮಣ, ಏತಕ್ಕಪ್ಪಾ ಇಷ್ಟು ವ್ಯಥೆ? ನಿನ್ನನ್ನು ನೋಡಿ ನನಗೂ ದುಃಖ ಉಮ್ಮಳಿಸುತ್ತದೆ'.

ವೆಂಕಟರಮಣ ಸುಮ್ಮನೆ ಇದ್ದ.

'ನಾಗಸ್ವಾಮಿ ಏನಾದರೂ ಅಂದನೇ?' ಎಂದು ಚಿಕ್ಕಮ್ಮ ಮತ್ತೆ ಪ್ರಶ್ನಿಸಿದರು. ಅದಕ್ಕೂ ವೆಂಕಟರಮಣ ಒಂದು ಚಕಾರವನ್ನೂ ನುಡಿಯಲಿಲ್ಲ. ಅವನಿಗೆ ಊಟವೂ ರುಚಿಸಲಿಲ್ಲ. ಒಂದು ತುತ್ತು ಅನ್ನ ಸಹ ಅವನ ಗಂಟಲಲ್ಲಿ ಇಳಿಯಲಿಲ್ಲ.

'ಏತಕ್ಕಪ್ಪಾ ಇಂದು ಊಟವನ್ನೇ ಮಾಡಲಿಲ್ಲ? ಅಡಿಗೆ ಚೆನ್ನಾಗಿಲ್ಲವೆ? ಅಥವಾ ಮೈಗೆ ಚೆನ್ನಾಗಿಲ್ಲವೇ ? ಮನಸ್ಸಿಗೆ ಸ್ವಸ್ಥವಿಲ್ಲವೆ ? ಅಂಥ ಮಹಾ ಚಿಂತೆಯಾದರೂ ಏನು ? ದೇವರನ್ನು ನೋಡಬೇಕೆಂಬ ಹಂಬಲವೆ?'

'ದೇವರನ್ನು ನೋಡಬೇಕೆಂಬ ಹಂಬಲ !' ಈ ಮಾತು ಚಿಕ್ಕಮ್ಮನ ಮುಖದಿಂದ ಹೊರಬೀಳುವುದೊಂದೇ ತಡ, ವೆಂಕಟರಮಣನ ದೇಹದಲ್ಲಿ ವಿದ್ಯುತ್ಸಂಚಾರವಾದಂತಾಯಿತು. ಎಲ್ಲೋ ವಿಹರಿಸುತ್ತಿದ್ದ ಮನಸ್ಸು ಸ್ಥಿಮಿತಕ್ಕೆ ಬಂದಿತು. 'ಹೌದು. ಅರುಣಾಚಲೇಶ್ವರನನ್ನು ಕಾಣಬೇಕೆಂಬ ಹಂಬಲವಿರುವುದು ನಿಜ' ಎಂದು ಅವನ ಅಂತರ್ವಾಣಿ ನುಡಿಯಿತು. ಅರೆ ಕ್ಷಣದಲ್ಲಿ ರೀತಿಯೇ ಬದಲಾಯಿಸಿತು. ಥಟ್ಟನೆ ಊಟಬಿಟ್ಟೆದ್ದನು.

'ಚಿಕ್ಕಮ್ಮ ಈ ದಿನ ಸ್ಕೂಲಿನಲ್ಲಿ ವಿಶೇಷ ಪಾಠ ಹೋಗಿ ಬರುತ್ತೇನೆ.'

'ಆಗಲಿ ಹೋಗಿ ಬಾ ಮಗು. ಇದೇನು ಊಟವನ್ನೇ ಮಾಡಲಿಲ್ಲವಲ್ಲಪ್ಪ ? ಊಟವಿಲ್ಲದೆ ಪಾಠ ಓದುವುದು ಹೇಗೆ ?'

'ಅದೇಕೋ ಏನೋ ಈ ದಿನ ನನಗೇನೂ ಬೇಡವಾಗಿದೆ.'

'ಏತಕ್ಕೆ ?'

'ಕಾರಣ ನನಗೆ ತಿಳಿದಿಲ್ಲ. ಇರಲಿ, ಚಿಕ್ಕಮ್ಮ ಹೊತ್ತಾಗುತ್ತ ಬಂತು ಬರುತ್ತೇನೆ'

ಎಂದು ಹೇಳಿದವನೇ ಕೈ ತೊಳೆದುಕೊಂಡು ಹೊರಬಿದ್ದನು.

ವೆಂಕಟರಮಣನಿಗೆ ಆಗಲೇ ಆತ್ಮದ ಕರೆ ಕೇಳಿಸಿತ್ತು. ಆತನ ಕೈಗೆ ದೊರೆತಿದ್ದ ಐದು ರೂಪಾಯಿಗಳು ಅವನ ಜೀವನದಲ್ಲಿ ನಡೆಯಬೇಕಾಗಿದ್ದ ಮಹಾಘಟನೆಗೆ ಸೋಪಾನವಾಗಿದ್ದವೆಂಬುದು ಆಗ ಯಾರಿಗೂ ಹೊಳೆಯಲೇ ಇಲ್ಲ. ಆಗಬೇಕಾದದ್ದು ಆಗಲೇಬೇಕೆಂಬ ಆರ್ಯೋಕ್ತಿಯುಂಟಷ್ಟೆ !

ಮನೆಯ ಮೂಲೆಯೊಂದರಲ್ಲಿ ಬಿದ್ದಿದ್ದ ಹಳೆಯ ಭೂಪಟದ ಪುಸ್ತಕ ವನ್ನು ತೆರೆದು, ಕಣ್ಣಲ್ಲಿ ಕಣ್ಣಿಟ್ಟು ತನಗೆ ಬೇಕಾದ ಊರನ್ನು ಅದರಲ್ಲಿ ಹುಡು ಕಾಡಹತ್ತಿದ. ಆ ಊರಿನ ಸುಳಿವೇ ಸಿಕ್ಕಲಿಲ್ಲ. ಆ ಭೂಪಟದ ಪ್ರಕಾರ ಅರುಣಾಚಲಕ್ಕೆ ಹೋಗಲು ತಿಂಡಿವನಂ ಹತ್ತಿರದ ರೈಲು ನಿಲ್ದಾಣವೆಂ ಬುದು ಗೋಚರವಾಯಿತು. ಆದರೆ, ಅರುಣಾಚಲಕ್ಕೆ ಒಂದು ಪ್ರತ್ಯೇಕ ರೈಲು ನಿಲ್ದಾಣವಿದೆಯೆಂಬುದು ಆತನಿಗೆ ವೇದ್ಯವಾಗಲಿಲ್ಲ. ಅದನ್ನು ತಿಳಿದು ಕೊಳ್ಳುವಷ್ಟು ತಾಳ್ಮೆಯೂ ಅವನಲ್ಲುಳಿದಿರಲಿಲ್ಲ.

ತನ್ನ ಪ್ರಯಾಣಕ್ಕೆ ಕೇವಲ ಮೂರು ರೂಪಾಯಿಗಳು ಮಾತ್ರ ಸಾಕೆಂದು ನಿರ್ಧರಿಸಿಯಾಯಿತು. ಉಳಿದೆರಡು ರೂಪಾಯಿಗಳು ಸುಲಭ ವಾಗಿ ಸಿಕ್ಕುವಂತೆ ಪೆಟ್ಟಿಗೆಯಲ್ಲಿರಿಸಬೇಕೆಂದು ತೀರ್ಮಾನಿಸಿದನು. ತನ್ನ ನಿರ್ಧಾರವನ್ನು ಮನೆಯವರಿಗೆ ಸ್ಪಷ್ಟಪಡಿಸುವ ಉದ್ದೇಶದಿಂದ ಒಂದು ಸಣ್ಣ ಕಾಗದ ತೆಗೆದುಕೊಂಡು ಅದರಲ್ಲಿ:—

"ನಾನು ನನ್ನ ತಂದೆಯ (ದೇವರು) ಶೋಧನೆಗಾಗಿ ಆತನ ಆಜ್ಞೆಗೆ ತಲೆ ಬಾಗಿ ಹೋಗುತ್ತಲಿದ್ದೇನೆ. ಈ ಪ್ರಯಾಣ ಪವಿತ್ರೋದ್ದೇಶಕ್ಕಾಗಿ. ಇದ ಕ್ಕಾಗಿ ಯಾರೂ ದುಃಖಿಸಬೇಕಾಗಿಲ್ಲ. ನನ್ನನ್ನು ಹುಡುಕಲು ಹಣವನ್ನು ಕೂಡ ವೆಚ್ಚಮಾಡಬೇಡಿರಿ.
ನಿನ್ನ ಕಾಲೇಜು ಫೀಜನ್ನು ಇನ್ನೂ ಕಟ್ಟಿಲ್ಲ.
ಎರಡು ರೂಪಾಯಿ ಇಲ್ಲಿದೆ." ಇಂತು,

ಈರೀತಿ ಬರೆದು, ಕಾಗದಕ್ಕೆ ರುಜುಮಾಡದೆ, ಅದನ್ನು ಅಣ್ಣನ ಪುಸ್ತಕಗಳ ಮಧ್ಯೆ ಸುಲಭವಾಗಿ ಸಿಕ್ಕುವಂತೆ ಇಟ್ಟು, ಮನೆಯಿಂದ ನೇರವಾಗಿ ರೈಲು ನಿಲ್ದಾಣಕ್ಕೆ ಹೊರಟುಬಿಟ್ಟನು.

ಆಗ ಮಧ್ಯಾಹ್ನದ ಉರಿಬಿಸಿಲು. ಒಂದು ಗಿಡವೂ ಕೂಡ ಅಲು ಗಾಡುತ್ತಿರಲಿಲ್ಲ. ಪ್ರಕೃತಿಯಲ್ಲಿ ಒಂದು ಬಗೆಯ ತೀಕ್ಷ್ಣತೆ ತಾಂಡವವಾಡು ತ್ತಿತ್ತು. ಅಂತಹ ತೀಕ್ಷ್ಣತೆಯೇ ವೆಂಕಟರಮಣನ ಮನಸ್ಸಿನಲ್ಲಿಯೂ ಮೂಡಿದ್ದಿತು.

ವೆಂಕಟರಮಣ ಮನೆಬಿಟ್ಟಾಗ ಬೆಳಗಿನ ೧೨ ಹೊಡೆದಿತ್ತು. ಅದೇ ಸಮಯಕ್ಕೆ ಸರಿಯಾಗಿ ತಿಂಡಿವನಂಗೆ ರೈಲು ಹೊರಟು ಬಿಡಬೇಕಾಗಿತ್ತು. ಇದಾವುದನ್ನೂ ಗಮನಿಸದೆ ವೆಂಕಟರಮಣ ನೇರವಾಗಿ ರೈಲು ನಿಲ್ದಾಣಕ್ಕೆ ಧಾವಿಸಿದನು. ಮನೆಯ ಮಮತೆಯನ್ನು ತೊರೆದನು. ಅರುಣಾಚಲದ ಕಡೆಗೆ ನಡೆದನು.

ಎಂಥ ವಿಚಿತ್ರ! ಪ್ರತಿದಿನ ಹೊತ್ತಿಗೆ ಸರಿಯಾಗಿ ಹೊರಡುತ್ತಿದ್ದ ರೈಲು ಆ ದಿನವೇ ತಡವಾಗಬೇಕೆ? ಮುಂದೆ ಮಹಾ ಪುರುಷನಾಗಬೇಕಾ ಗಿದ್ದವನನ್ನು ಕರೆದೊಯ್ಯಲೆಂದೇ ರೈಲು ತಡವಾಗಿತ್ತೆಂದು ಕಾಣುತ್ತದೆ. ಯಾರಿಗೆ ಯಾವ ಸಮಯದಲ್ಲಿ ಎಂಥ ಭಾಗ್ಯ ಪ್ರಾಪ್ತವಾಗುತ್ತದೆಂಬುದು ಯಾರಿಗೆ ತಾನೆ ತಿಳಿಯುತ್ತದೆ?

ರೈಲು ನಿಲ್ದಾಣಕ್ಕೆ ಬಂದ ವೆಂಕಟರಮಣ ತಿಂಡಿವನಂಗೆ ಹೋಗಲು ಎಷ್ಟು ದರವಿದೆ? ಎಂದು ತಿಳಿಯಲಿಷ್ಟಪಟ್ಟನು. ಬೇರೆಯವರನ್ನು ಕೇಳಲು ಅವನಿಗೆ ನಾಚಿಕೆ; ಒಂದು ಬಗೆಯ ಸಂಕೋಚ. ಇದೆಲ್ಲದರ ಜೊತೆಗೆ ರಹಸ್ಯ ವಾಗಿ ಕೈಗೊಂಡಿದ್ದ ಈ ಪಯಣದ ವಿಷಯ ಎಲ್ಲಿ ಬಯಲಿಗೆ ಬಿದ್ದೀತೋ ಎಂಬ ಭಯ ಬೇರೆ ಆವರಿಸಿತ್ತು. ಸರಿ. ಯಾರನ್ನೂ ಕೇಳಲಿಲ್ಲ. ಪಕ್ಕದ ಲ್ಲಿಯೇ ರೈಲ್ವೆ ದರ ಮತ್ತು ಕಾಲವನ್ನು ಸೂಚಿಸಲು ತೂಗುಹಾಕಿದ್ದ ಬೋರ್ಡನ್ನು ನೋಡಿದನು. ತಿಂಡಿವನಂಗೆ ಎರಡು ರೂಪಾಯಿ ಹದಿಮೂರು ಆಣೆಗಳೆಂದು ಗೊತ್ತಾಯಿತು. ಅವನ ಬಳಿಯಿದ್ದ ಮೂರು ರೂಪಾಯಿಯ ವೆಚ್ಚದಲ್ಲಿಯೇ ತನ್ನ ಗುರಿಯಾದ ತಿರುವಣ್ಣಾಮಲೆಯನ್ನು ತಲುಪ ಬಹುದಾಗಿದ್ದರೂ ಈ ಸಮಯದಲ್ಲಿ ಅದನ್ನು ವಿಚಾರಿಸಿ ತಿಳಿಯುವಷ್ಟು ವ್ಯವ ಧಾನ ಅವನಿಗೆ ಪ್ರಾಪ್ತವಾಗಲಿಲ್ಲ. ತಾನು ನೋಡಿದ ಬೋರ್ಡಿನಲ್ಲಿಯೇ

ಅವನು ಇನ್ನು ಕೊಂಚ ಕೆಳಗೆ ನೋಡಿದ್ದರೆ ತಿರುವಣ್ಣಾಮಲೆಗೆ ರೈಲ್ವೆ ನಿಲ್ದಾಣ ವುಂಟೆಂದು ಅವನಿಗೆ ಗೊತ್ತಾಗುತ್ತಿತ್ತು. ಅವನ ಮನಸ್ಸು ಆಗ ಕಲಕಿ ಹೋಗಿದ್ದುದರಿಂದ ಅವನ ಗಮನ ಈ ಕಡೆಗೆ ಹರಿಯಲಿಲ್ಲ.

ವೆಂಕಟರಮಣ ಹಿಂದು ಮುಂದು ನೋಡದೆ ತಿಂಡಿವನಂಗೆ ಟಿಕೆಟ್ಟನ್ನು ಕೊಂಡುಕೊಂಡನು. ಉಳಿದ ಮೂರಾಣೆಗಳನ್ನು ಮೈಮೇಲೆ ಹೊದೆದಿದ್ದ ಬಟ್ಟೆಯ ತುದಿಯಲ್ಲಿ ಕಟ್ಟಿಕೊಂಡನು.

ರೈಲು ಬಂದೇ ಬಿಟ್ಟಿತು. ಅದರ ಜೊತೆಗೆ ವೆಂಕಟರಮಣನ ಆತುರತೆಯೂ ಹೆಚ್ಚಿತು. ಅವನು ರೈಲಿನಲ್ಲಿ ಹತ್ತಿ ಕುಳಿತುಕೊಂಡನು. ಪ್ರಾಯೇಣ ಅದು ಮೂರನೆ ತರಗತಿ ಗಾಡಿ ಇರಬೇಕು. ಅವನೆದುರಿಗೆ 'ಕಳ್ಳರಿದ್ದಾರೆ ಎಚ್ಚರಿಕೆ' ಎಂಬ ಒಕ್ಕಣಿಕೆ ಇತ್ತು. ವೆಂಕಟರಮಣನಲ್ಲಿ ಕದಿಯಲ್ಪಡಬಹುದಾದ ಯಾವ ವಸ್ತುವೂ ಇಲ್ಲದ್ದರಿಂದ ಅವನಿಗೆ ಯಾವ ಭಯವೂ ಇರಲಿಲ್ಲ. ಅವನಲ್ಲಿದ್ದುದು ಒಂದೇ ಒಂದು. ಅದು ಯಾರೂ ಕದಿಯಲಾಗದ, ನಾಶವಾಗದ, ಚಿರನೂತನವಾದ ಧ್ಯಾನಾಸಕ್ತಿ. ದೇವನ ಬಗೆಗೇ ಸದಾ ಚಿಂತಿಸುವ ಭಕ್ತರ ಬಗೆಗೆ ಶ್ರೀ ಕೃಷ್ಣಪರಮಾತ್ಮ ಹೇಳಿದ ಮಾತು * ವೆಂಕಟರಮಣನ ಬಾಳಿಗೆ ಸಂಪೂರ್ಣವಾಗಿ ಅನ್ವಯಿಸುತ್ತಿತ್ತು.

ರೈಲು, ಸುಂದರ ಮಧುರೆಯ ನಿಲ್ದಾಣದಿಂದ ತಿಂಡಿವನಂನ ಮುಖವಾಗಿ ಮೆಲ್ಲಮೆಲ್ಲಗೆ ಚಲಿಸಲಾರಂಭಿಸಿತು. ವೆಂಕಟರಮಣ ಕಿಟಕಿಯಿಂದಲೇ ಒಮ್ಮೆ ದಿಟ್ಟಿಸಿ ನೋಡಿದನು. ದೇವಿ ಮೀನಾಕ್ಷೀ ಸುಂದರೇಶ್ವರರ ದಿವ್ಯ ಮೋಹಕ ವಿಗ್ರಹ, ನಯನ ಮನೋಹರ ದೇವಾಲಯ. ನಾಲ್ಕೂ ದಿಕ್ಕಿನ ರಮಣೀಯ ಗೋಪುರಗಳು ಕಣ್ಣುಮುಂದೆ ಬಂದು ನಿಂತವು. ತಕ್ಷಣವೇ ಅವನು ಧ್ಯಾನಾಸಕ್ತನಾದನು. ತನ್ನ ತಂದೆ ಅರುಣಾಚಲೇಶನ ಸವಿನೆನಪಿನಲ್ಲಿ ಮಗ್ನನಾಗಿ

---

* ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥
—ಗೀತಾ ಶ್ಲೋಕ ೧೨- ಅಧ್ಯಾಯ ೯

ತನ್ನನ್ನೇ ತಾನು ಮರೆತನು. ರೈಲು ಮಾತ್ರ ತನ್ನ ಕರ್ತವ್ಯ ಮಾಡುತ್ತಿತ್ತು. ವೇಗವಾಗಿ ಓಡುತ್ತಿತ್ತು. ಇಲ್ಲಿಗೆ ವೆಂಕಟರಮಣನ ಜೀವನದ ಮಹಾ ಯಾತ್ರೆಗೆ ಮೊದಲಾಯಿತು.

ತಿರುಚ್ಚುಳಿಯ ಸುಂದರಂ ಅಯ್ಯರ್ ಅವರ ಮನೆತನಕ್ಕೊದಗಿದ ಈ ನಷ್ಟ ಪ್ರಪಂಚದ ಭಕ್ತಕೋಟಿಯ ಭಾಗ್ಯೋದಯಕ್ಕೆ ಒದಗಿದ ಅಮೂಲ್ಯ ಲಾಭವಾಗಿ ಪರಿಣಮಿಸಿತು.



೫

## ಧ್ಯೇಯದ ದಾರಿಯಲ್ಲಿ

ರೈಲು ಚಲಿಸುತ್ತಲೇ ಇತ್ತು. ಸೃಷ್ಟಿಯ ಸೊಬಗು ತಾನೇ ತಾನಾಗಿ ಕಂಗೊಳಿಸುತ್ತಲಿತ್ತು. ಹಚ್ಚನೆಯ ಹಸುರು ಕಣ್ಣಿಗೆ ಸಂತಸವನ್ನುಂಟುಮಾಡು ತ್ತಿತ್ತು. ತೆಂಗಿನ ತೋಟದ ಗರಿಗಳ ಕರ್ಣ ನಿಸ್ವನ ಆಪ್ಲಾದಕರವಾಗಿತ್ತು. ತಾಳೆಯ ಮರಗಳು ಸಾಲು ಸಾಲಾಗಿ ನಿಂತಿದ್ದವು. ತಿಳಿನೀರಿನ ಹೊಳೆ ಹಳ್ಳಗಳು ಸೌಂದರ್ಯವನ್ನು ಸೂಸಿ ಸಾಗಿದ್ದವು. ಸೃಷ್ಟಿಯಲ್ಲಿ ಎಲ್ಲೆಲ್ಲೂ ಒಂದು ಬಗೆಯ ಸುಪ್ರಸನ್ನತೆಯು ಕಂಡು ಬರುತ್ತಿತ್ತು.

ಇತ್ತ ರೈಲಿನಲ್ಲಿದ್ದ ಪ್ರಯಾಣಿಕರ ತಂಡದಲ್ಲಿ ಮಾತಿನ ಪ್ರವಾಹವೇ ಹರಿದು ಬರುತ್ತಿತ್ತು. ಒಂದು ವಿಷಯವೆ? ಎರಡು ವಿಷಯವೆ? ಜೀವನದ ಅನಂತ ವಿಷಯಗಳು ಪ್ರಯಾಣಿಕರ ಮಾತಿನಲ್ಲಿ ಸಹಜವಾಗಿ ಮಿಂಚಿ ಬರ ತ್ತಿದ್ದವು. 'ಕತೆಗೆ ಕಾಲಿಲ್ಲ; ಮಾತಿಗೆ ಮೊದಲಿಲ್ಲ' ಎಂಬ ಗಾದೆ ನಿಜವೇ ಎನ್ನುವಂತಿತ್ತು. ಜನರನ್ನು ತುಂಬಿಕೊಂಡು ಹೊರಟದ್ದ ರೈಲು ಯಾವ ಮಾತಿಗೂ ಕಿವಿಗೊಡದೆ ನಿಷ್ಠೆಯಿಂದ ತನ್ನಷ್ಟಕ್ಕೆ ತಾನು ಹೋಗುತ್ತಲಿತ್ತು.

ವೆಂಕಟರಮಣನ ಎದುರಿಗೆ ಓರ್ವ ಬಿಳಿಯ ಗಡ್ಡದ ಮೌಲ್ವಿ ಕುಳಿತು ಕೊಂಡಿದ್ದನು. ಅವನು ಇತರ ಪ್ರಯಾಣಿಕರೊಡನೆ ಸಾಧು ಸಂತರ ಜೀವ ನದ ಹಿರಿಮೆಯ ಬಗ್ಗೆ ಒಂದೇ ಸಮನೆ ವಾದವನ್ನೇ ಪ್ರಾರಂಭಿಸಿದ್ದನು. ಈ ಎಲ್ಲ ಮಾತುಗಳೂ ವೆಂಕಟರಮಣನ ಕಿವಿಯ ಮೇಲೆ ಬೀಳುತ್ತಿದ್ದರೂ ಅವನ ಗಮನ ಇತ್ತ ಕಡೆಗೆ ಹಿಡಿಯಲೇ ಇಲ್ಲ. ಅವನ ಮನಸ್ಸು ಅರುಣಾಚಲೇಶನ ದಿವ್ಯ ಸನ್ನಿಧಿಗೆ ಧಾವಿಸುತ್ತಲಿತ್ತು.

ಬಹಳ ಹೊತ್ತಿನಿಂದ ತದೇಕ ಚಿತ್ತನಾಗಿ ಕುಳಿತಿದ್ದ ತೇಜಸ್ವೀ ತರುಣನ ಮೇಲೆ ಆ ಮಾತುಗಾರ ಮೌಲ್ವಿಯ ದೃಷ್ಟಿ ಬಿತ್ತು.

'ತಾವೆಲ್ಲಿಗೆ ಹೋಗುತ್ತಿದ್ದೀರಿ ಸ್ವಾಮಿ?'

ಎಂದು ಮೌಲ್ವಿ ಪ್ರಶ್ನಿಸಿದನು.

'ತಿರುವಣ್ಣಾಮಲೆಗೆ!'

'ನಾನೂ ಅಲ್ಲಿಗೆ ಹೋಗುತ್ತಿದ್ದೇನೆ.'

'ಏನು ? ತಿರುವಣ್ಣಾಮಲೆಗೆ?'

'ಅಲ್ಲ. ನಾನು ಅದರ ಮುಂದಿನ ಸ್ಟೇಷನ್ನಿಗೆ.'

'ಹಾಗಾದರೆ ಮುಂದಿನ ಸ್ಟೇಷನ್ನು ಯಾವುದು?'

'ತಿರುಕೊಯಿಲೂರು'

'ಹಾಗಾದರೆ ತಿರುವಣ್ಣಾಮಲೆಗೆ ರೈಲು ಹೋಗುತ್ತದೆಯೇ?'

ಎಂದು ಆಶ್ಚರ್ಯಯುಕ್ತ ಧ್ವನಿಯಲ್ಲಿ ಕೇಳಿದನು.

'ಓಹೋ ತಾವು ಪ್ರಯಾಣಕ್ಕೆ ಹೊಸಬರೆಂದು ತೋರುತ್ತದೆ. ನೀವು ಎಲ್ಲಿಗೆ ಹೋಗಬೇಕೆಂದು ಟಿಕೆಟ್ಟನ್ನು ತೆಗೆದುಕೊಂಡಿರುವಿರಿ?'

'ತಿಂಡಿವನಂಗೆ'

'ಅಯ್ಯೋ ದೇವರೆ ! ನೀವು ತಿಂಡಿವನಂಗೆ ಹೋಗಲೇ ಬೇಕಾಗಿಲ್ಲ. ವಿಲ್ಲುಪುರಂ ಜಂಕ್ಷನ್ನಿನಲ್ಲಿ ತಿರುವಣ್ಣಾಮಲೆಗೆ ಹೋಗುವ ರೈಲನ್ನು ಹತ್ತಬೇಕು.'

'ಸರಿ' ಎಂದು ವಿಷಯವನ್ನರಿತುಕೊಂಡು ಮತ್ತೆ ಧ್ಯಾನಾಸಕ್ತನಾದನು.

ಸಂಧ್ಯಾ ಸಮಯ ಸಮೀಪಿಸಿತ್ತು. ಆಕಾಶದಲ್ಲಿ ಸಂಜೆ ಕೆಂಪು ತಾನೇ ತಾನಾಗಿ ಹಬ್ಬಿ ನಿಂತಿತ್ತು. ಹಕ್ಕಿಗಳು 'ಚಿಲಿಪಿಲಿ' ಎಂದು ಧ್ವನಿಮಾಡುತ್ತ ತಮ್ಮ ಗೂಡುಗಳಿಗೆ ಓಡುತ್ತಿದ್ದವು. ರೈಲು ತಿರುಚನಾಪಳ್ಳಿಗೆ ಬಂದು ನಿಂತಿತು.

ಈಗ ವೆಂಕಟರಮಣನಿಗೆ ಹಸಿವು ತೋರಿಬಂದಿತು. ತನ್ನ ಬಟ್ಟೆಯಲ್ಲಿ ಕಟ್ಟಿಟ್ಟಿದ್ದ ಮೂರಾಣೆ ಚಿಲ್ಲರೆಯಲ್ಲಿ ಕೇವಲ ಆರು ಕಾಸನ್ನು ತೆಗೆದುಕೊಂಡು ಎರಡು ಮರಸೇಬನ್ನು ಕೊಂಡುಕೊಂಡನು. ಒಂದು ಚೂರನ್ನು ತಿನ್ನುವುದರೊಳಗಾಗಿ ಅವನ ಹೊಟ್ಟೆ ತುಂಬಿಹೋಯಿತು. ಮನೆಯಲ್ಲಿದ್ದಾಗ ವೆಂಕಟರಮಣ ಎರಡು ಹೊತ್ತು ಪುಷ್ಕಳವಾಗಿ ಊಟಮಾಡುವುದರ ಜೊತೆಗೆ

ಪ್ರತಿನಿತ್ಯ ಬೆಳಗಿನ ಹೊತ್ತು ತಂಗಳನ್ನ ತಿನ್ನುತ್ತಿದ್ದ. ಸಾಯಂಕಾಲದ ಉಪಾಹಾರ ತಪ್ಪುತ್ತಿರಲಿಲ್ಲ ಆದರೆ ಈ ದಿನ ತಿಂದ ಒಂದೇ ಒಂದು ಜೂರು ಮರಸೇಬಿನ ಹಣ್ಣು ಅವನ ಹಸಿವನ್ನು ಹಿಂಗಿಸಿತ್ತು. ತೃಪ್ತಿಯನ್ನು ಉಂಟುಮಾಡಿತು.

ವಿಲ್ಲುಪುರಂ ತಲುಪಲು ಇನ್ನೂ ಬೇಕಾದಷ್ಟು ಸಮಯವಿತ್ತು. ವೆಂಕಟ ರಮಣ ಮತ್ತೆ ಧ್ಯಾನಾಸಕ್ತನಾದ. ಅವನು ನಿದ್ರೆಗೂ ಧ್ಯಾನಾಸಕ್ತಿಯ ಸ್ಥಿತಿಗೂ ಇದ್ದ ವ್ಯತ್ಯಾಸವನ್ನೇ ಅರಿತಿರಲಿಲ್ಲ. ಸಂಗಡಿಗರಾದ ಸಾಮಾನ್ಯ ಪ್ರಯಾಣಿಕರು ಎಲ್ಲೋ ಹುಡುಗ ತೂಕಡಿಸುತ್ತಿರುವನೆಂದು ಬಗೆದರು.

ವಿಲ್ಲುಪುರಂ ನಿಲ್ದಾಣಕ್ಕೆ ರೈಲು ಬಂದು ನಿಂತಾಗ ರಾತ್ರಿ ಮೂರು ಗಂಟೆಯಾಗಿತ್ತು.

ವೆಂಕಟರಮಣ ರೈಲಿನಿಂದಿಳಿದನು. ಬೆಳಗಿನ ಜಾವ ವಿಲ್ಲುಪುರಂನಲ್ಲಿ ತಿರುವಣ್ಣಾಮಲೆಗೆ ಹೋಗುವ ರಸ್ತೆಯನ್ನು ಹುಡುಕಾಡುತ್ತಿದ್ದನು. ದಾರಿ ತಿಳಿಯದಾಯಿತು. ಸಮೀಪದಲ್ಲಿಯೇ ಇದ್ದ 'ಮಾಂಬಳ ಪಟ್ಟಿಗೆ' ಎಂದು ಬರೆದಿದ್ದುದು ಕಂಡುಬಂತು. ಮಾಂಬಳಪಟ್ಟೆ ತಿರುವಣ್ಣಾಮಲೆಯ ಮಾರ್ಗದಲ್ಲಿಯೇ ಇದೆಯೆಂಬುದು ತಿಳಿದುಬರಲಿಲ್ಲ. ಬೇರೆಯವರನ್ನು ಕೇಳಿದರೆ ತಿಳಿಯಬಹುದಾಗಿತ್ತು. ಆದರೆ, ನಾಚಿಕೆ ಅವನನ್ನು ಹಿಂದೆಳೆಯಿತು. ದಾರಿಗಾಗಿ ಅಲೆದಲೆದು ಅವನ ಹಸಿವು ತೀರ ಹೆಚ್ಚಿತು. ಹೋಟಲಿನತ್ತ ತೆರಳಿದನು.

'ಸ್ವಾಮಿ, ಊಟಕ್ಕೇನಾದರೂ ವ್ಯವಸ್ಥೆ ಮಾಡುವಿರಾ?' ಎಂದು ಆ ಖಾನಾವಳಿಯ ಮಾಲೀಕನನ್ನು ವೆಂಕಟರಮಣ ಕೇಳಿದನು.

'ಊಟಮಾಡಬೇಕಾದರೆ ಮಧ್ಯಾಹ್ನದ ವರೆಗೂ ಕಾಯಬೇಕು. ಇಷ್ಟು ಬೇಗ ಅಡಿಗೆ ಸಿದ್ಧವಾಗುವುದಿಲ್ಲ' ಎಂದು ಉತ್ತರ ಬಂತು. ವೆಂಕಟರಮಣ ಅಲ್ಲಿಯೇ ಕುಳಿತು ಸಮಾಧಿಸ್ಥನಾಗಿಬಿಟ್ಟನು.

ಆಕರ್ಷಕವಾಗಿದ್ದ ಈ ತರುಣನ ಮೇಲೆ ಈಗ ಮಾತ್ರ ಆ ಹೋಟೆಲು ಮಾಲೀಕನ ದೃಷ್ಟಿ ಬಿತ್ತು. ನೀಳವಾದ ಕರಿಕುರುಳು. ವಿಶಾಲವಾದ ಹಣೆ

ತೇಜಃ ಪುಂಜವಾದ ನಯನಯುಗ್ಮ. ಸಂಪಿಗೆಯ ಹೂವಿನಂತಿದ್ದ ನಾಸಿಕ, ನೀಳವಾದ ತೋಳುಗಳು ಒಟ್ಟನಲ್ಲಿ ಅತ್ಯಾಕರ್ಷಕ ವ್ಯಕ್ತಿತ್ವವುಳ್ಳ ವೆಂಕಟರಮಣ ಹೋಟೆಲು ಮಾಲೀಕನ ಮನಸ್ಸನ್ನು ಸೂರೆಗೊಂಡಿದ್ದನು.

ಲೋಕದಲ್ಲಿ ಉತ್ತಮ ವ್ಯಕ್ತಿತ್ವವನ್ನು ಕಂಡು ತಲೆಬಾಗದವರಾರು ?

ಊಟದ ಸಮಯವಾಯಿತು. ಹೋಟೆಲು ಮಾಲೀಕ ಧ್ಯಾನಾಸಕ್ತ ನಾಗಿದ್ದ ತರುಣನನ್ನು ಎಚ್ಚರ ಗೊಳಿಸಿದ. ಊಟಕ್ಕೆ ಕೂಡುವಂತೆ ಮಾಡಿದ. ಭೋಜನವಾದ ಮೇಲೆ ವೆಂಕಟರಮಣ ಎರಡಾಣೆಗಳನ್ನು ಹೋಟೆಲು ಮಾಲೀಕನ ಕೈಗೆ ಕೊಡಲು ಬಂದಾಗ 'ನಿನ್ನಲ್ಲಿ ಎಷ್ಟು ಹಣವಿದೆ?' ಎಂದು ಆತ ಪ್ರಶ್ನಿಸಿದ.

'ಎರಡೂವರೆ ಆಣೆ'

'ಬೇಡ ನಿನ್ನಲ್ಲಿಯೇ ಇರಲಿ' ಎಂದು ಹೋಟೆಲು ಮಾಲಿಕ ಹೇಳು ವುದೇ ತಡ ವೆಂಕಟರಮಣ ಅಲ್ಲಿಂದ ಹೊರಟು ರೈಲು ನಿಲ್ದಾಣಕ್ಕೆ ಆಗಮಿಸಿ ಮಾಂಬಳಪಟ್ಟಿಗೆ ಟಿಕೆಟ್ಟು ಕೊಂಡುಕೊಂಡನು.

ಮಾಂಬಳಪಟ್ಟಿಗೆ ಬಂದು ಸುಮಾರು ಹತ್ತು ಮೈಲಿ ನಡೆದು ಅರಯಣಿ ನಲ್ಲೂರು ದೇವಾಲಯಕ್ಕೆ ಆಗಮಿಸಿದನು. ಇಷ್ಟುದೂರ ಅದ ರಲ್ಲೂ ಉರಿಬಿಸಿಲಿನಲ್ಲಿ ಸುಕುಮಾರನಾದ ಅವನೆಂದೂ ನಡೆದಿರಲಿಲ್ಲ. ತುಂಬ ಆಯಾಸವಾಗಿತ್ತು. ವಿಶ್ರಾಂತಿ ಸಿಕ್ಕಿದರೆ ಸಾಕು ಎನಿಸಿತ್ತು. ಆಗ ಸಂಜೆ ಯಾಗಿತ್ತು. ದೇವಾಲಯದಲ್ಲಿ ಯಾರ ಸುಳಿವೂ ಇರಲಿಲ್ಲ.

ವೆಂಕಟರಮಣ ದೇವಾಲಯದ ಪ್ರದೇಶಕ್ಕೆ ಬಂದ. ಅದು ಅತುಲ ನಾಥೇಶ್ವರನ ದೇವಾಗಾರ. ಒತ್ತಟ್ಟಿಗೆ ಮಿನುಗುವ ದೀವಿಗೆಯೊಂದು ಉರಿಯು ತ್ತಿತ್ತು. ಆ ಮಂದ ಪ್ರಕಾಶವಿದ್ದ ಮಂಟಪದಲ್ಲಿ ವೆಂಕಟರಮಣ ಕುಳಿತು ಧ್ಯಾನಾಸಕ್ತನಾದ. ಸ್ವಲ್ಪಸಮಯದಲ್ಲಿಯೇ ಅವನಿಗೆ ಸೆಳೆಮಿಂಚಿನಲ್ಲಿ

+

ಜ್ಯೋತಿ*ಯೊಂದು ಕಂಗೊಳಿಸಿ ಮಾಯವಾಯಿತು. ತಕ್ಷಣವೇ ಅವನೆಷ್ಟು ತಾನು ಕಂಡ ಜ್ಯೋತಿ 'ಬಂದುದೆಲ್ಲಿಂದ' ಎಂದು ಶೋಧನೆಗೆ ಮೊದಲುಮಾಡಿದನು. ಶೋಧನೆ ಸಂಶೋಧನೆಯಲ್ಲಿಯೇ ಉಳಿಯಿತು. ತಾನು ಕಂಡ ಜ್ಯೋತಿ ಅತುಲ ನಾಥೇಶ್ವರನಿಂದ ಬಂದಿಲ್ಲವೆಂದು ಅವನಿಗೆ ಕಡೆಗೆ ನಿರ್ಧಾರವಾಯಿತು.

ರಾತ್ರಿ ಪೂಜಾದಿಗಳು ಮುಗಿದಮೇಲೆ ಅಡಿಗೆಯವನು ದೇವಸ್ಥಾನಕ್ಕೆ ಬೀಗ ಹಾಕಲೆಂದು ಸಿದ್ಧನಾದಾಗ ಹಜಾರದಲ್ಲಿ ಯಾರೋ ಒಬ್ಬರಿದ್ದಂತೆ ಕಂಡುಬಂದಿತು.

"ಯಾರದು? ಹೊರಗೆ ಬನ್ನಿ. ದೇವಸ್ಥಾನದ ಬಾಗಿಲು ಹಾಕಬೇಕು"

ವೆಂಕಟರಮಣ ಸಮಾಧಿಯಿಂದ ಎಚ್ಚತ್ತು ದೇವಸ್ಥಾನದಿಂದ ಹೊರಬದ್ದನು.

"ದೇವರ ಪ್ರಸಾದ ಕೊಡುತ್ತೀರಾ?" ಎಂದು ಕೇಳಿದ ವೆಂಕಟರಮಣ ಅವನ ಧ್ವನಿಯಲ್ಲಿ ಭಕ್ತಿಯ ಆವೇಗವಿತ್ತು; ಸಾತ್ವಿಕತೆಯ ಕಂಪನವಿತ್ತು.

"ಇಲ್ಲಿ ನಿನಗೆ ಅನ್ನವನ್ನು ಯಾರೂ ಮಾಡಿಟ್ಟಿಲ್ಲ" ಎಂದು ಅಡಿಗೆಯವನು ಬಿರುಸಾಗಿಯೇ ಉತ್ತರವಿತ್ತನು.

"ಹೋಗಲಿ, ಈ ರಾತ್ರಿ ಇಲ್ಲಿ ತಂಗಲಾದರೂ ಅವಕಾಶವುಂಟೆ?"

"ಇದೂ ಸಾಧ್ಯವಿಲ್ಲ" ಎಂದು ಉತ್ತರ ಬಂತು. ಕೀಳೂರಿಗೆ ಹೋದರೆ ಏನಾದರೂ ಸಿಕ್ಕೀತು ಎಂದು ಪರಿಚಾರಕರಲ್ಲೊಬ್ಬನು ಹೇಳಿದನು. ಅಂತೆಯೇ ವೆಂಕಟರಮಣ ಕೀಳೂರಿನ ವೀರಟ್ಟೇಶ್ವರ ದೇವಾಲಯಕ್ಕೆ, ಅಲ್ಲಿಗೆ ಹೋಗುತ್ತಿದ್ದವರೊಡನೆ ತೆರಳಿದ. ದೇವಸ್ಥಾನದಲ್ಲಿ ಪೂಜೆ ಮುಗಿಯಿತು. ತರುಣನಿಗೆ ಇಲ್ಲಿಯೂ ಸಹ ಏನೂ ದೊರೆಯುವಂತೆ ಕಾಣಲಿಲ್ಲ.

---

* ಜ್ಞಾನಸಂಬಂಧ ಮೂರ್ತಿಗಳು (ಅರುವತ್ತು ಮೂವರು ಪುರಾತನರಲ್ಲಿ ಒಬ್ಬರು) ಇಲ್ಲಿ ಅರುಣಾಚಲೇಶ್ವರನನ್ನು ಪ್ರತಿಷ್ಠಿಸಿದಾಗ ಇದೇ ರೀತಿ ಜ್ಯೋತಿರ್ದರ್ಶನ ಪಡೆದಿದ್ದರಂತೆ.

ಸಾಯಂಕಾಲದಿಂದ ವೆಂಕಟರಮಣನನ್ನೇ ಹಿಂಬಾಲಿಸಿದ್ದ ತಮಟೆ ಬಾರಿಸುವವನು ಸಿಟ್ಟಿನಿಂದ ಮುಂದೆ ಬಂದು "ಅದೇತಕ್ಕೆ ಕೊಡುವುದಿಲ್ಲ ಸ್ವಾಮಿ. ನನ್ನ ಭಾಗವನ್ನಾದರೂ ಇವರಿಗೆ ಕೊಡಿ" ಎಂದು ಹೇಳಿದ. ದೇವ ಸ್ಥಾನದ ಅರ್ಚಕ ವೆಂಕಟರಮಣನಿಗೆ ಒಂದು ತಟ್ಟೆ ಪ್ರಸಾದವನ್ನಿತ್ತನು. ವೆಂಕಟರಮಣ ನೆರೆಯುವನೊಬ್ಬನ ನೆರವಿನಿಂದ ನೀರಿಗಾಗಿ ಪಕ್ಕದ ಶಾಸ್ತ್ರಿಗಳ ಮನೆಗೆ ತೆರಳಿದ. ಅವನಿಗೆ ಆಗಲೇ ನಿದ್ರೆ ಬಂದಂತಿತ್ತು. ನಿದ್ರೆಯಲ್ಲಿಯೇ ನಡೆದು * ಹಸಿವಿನ ಆಯಾಸದಿಂದ ಮೂರ್ಛೆಹೋದ. ಈ ತರುಣ ಜ್ಞಾನತಪ್ಪಿ ಬಿದ್ದುದನ್ನು ಕಂಡು ಜನ ಜಂಗುಳಿ ಸೇರಿತು. ಸ್ವಲ್ಪಹೊತ್ತಿನ ಮೇಲೆ ಆತನು ಎಚ್ಚತ್ತು ಕೆಳಗೆ ಚಲ್ಲಿದ್ದ ಪ್ರಸಾದದ ಅಗುಳನ್ನು ಆರಿಸಿಕೊಂಡು ತಿಂದು ಆ ರಾತ್ರಿ ಅಲ್ಲಿಯೇ ಮಲಗಿ ನಿದ್ರಿಸಿದನು.

ಮರುದಿನ ಸೋಮವಾರ (೩೧-೧-೧೮೮೬.) ಅಂದು ಗೋಕುಲಾಷ್ಟಮಿ ಬೇರೆ. ವೆಂಕಟರಮಣನಿಗೆ ಹೇಳತೀರದಷ್ಟು ದೇಹಾಯಾಸವಾಗಿತ್ತು. ತಿರು ವಣ್ಣಾಮಲೆಗೆ ತಲ್ಪಬೇಕಾಗಿದ್ದರೆ ಆತ ಇನ್ನೂ ಇಪ್ಪತ್ತು ಮೈಲಿ ನಡೆದು ಹೋಗಬೇಕಾಗಿತ್ತು; ವಿಪರೀತ ಹಸಿವು. ಆಗ ವೆಂಕಟರಮಣ ಹೊಟ್ಟೆಗೆ ಕೊಂಚ ಏನಾದರೂ ಹಾಕಿ ಜಠರಾಗ್ನಿಯನ್ನು ಶಮನಮಾಡಿ ಆಮೇಲೆ ರೈಲಿ ನಿಂದ ಪ್ರಯಾಣ ಬಳೆಸಿದರಾಯಿತು ಎಂದು ಚಿಂತಿಸಿದನು. ರೈಲು ಟಿಕೆಟ್ಟು ಕೊಳ್ಳಬೇಕಲ್ಲ ! ಖರ್ಚಿಗೆ ಹಣ? ಎಂಬ ಪ್ರಶ್ನೆ ಅವನ ಮುಂದೆ ಬಂದು ನಿಂತಿತು. ಕೊಂಚ ಹೊತ್ತು ವಿಚಾರಮಾಡಿ ಕಿವಿಯಲ್ಲಿದ್ದ ಕರ್ಣಾಭರಣ ವನ್ನು ಹೊರಕ್ಕೆ ತೆಗೆದುಬಿಟ್ಟನು. ಇಂಥ ವಸ್ತುಗಳನ್ನು ಮಾರುವುದಕ್ಕಾಗಲಿ, ಗಿರವಿ ಇಡುವುದಕ್ಕಾಗಲಿ ಅವನಿಗೆ ತಿಳಿಯದು. ಇವುಗಳನ್ನು ಯಾರಬಳಿ ಇಟ್ಟು ಅಗತ್ಯವಾದ ಹಣ ಪಡೆಯಲಿ ಎಂದು ಒಂದುಕ್ಷಣ ವಿಚಾರಮಾಡಿ ದನು. ಹಸಿವು ಕ್ಷಣಕ್ಷಣಕ್ಕೂ ಉಲ್ಬಣಿಸುತ್ತಿತ್ತು. ಮೊದಲು ತುತ್ತಿನ

---

* ನಿದ್ರೆಯಲ್ಲಿಯೇ ನಡೆಯುವುದು ವೆಂಕಟರಮಣನಿಗೆ ಚಿಕ್ಕಂದಿನಿಂದಲೇ ರೂಢಿಯಾಗಿತ್ತು. ಇದಕ್ಕೆ ಸೋಮ್ನಂಬುಲಿಸಂ (Somnambulism ಎಂದು ಹೇಳುತ್ತಾರೆ.

ಚೀಲವನ್ನು ತುಂಬೋಣವೆಂದು ನಿರ್ಧರ ಮಾಡಿಕೊಂಡನು. ಮುತ್ತುಕೃಷ್ಣ ಭಾಗವತರೆಂಬುವರ ಮನೆಗೆ ಆಗಮಿಸಿ "ಊಟಕ್ಕೆ ಹಾಕುತ್ತೀರಾ? ಸಾಧ್ಯವೇ?" ಎಂದು ವಿನಯದಿಂದ ಪ್ರಾರ್ಥಿಸಿದನು. "ಒಳಗೆ ಹೆಂಗುಸರಿದ್ದಾರೆ ಕೇಳು" ಎಂದು ಉತ್ತರ ಬಂತು. ಶ್ರೀಕೃಷ್ಣ ಜನ್ಮಾಷ್ಟಮಿಯಂಥ ಪವಿತ್ರವಾದ ದಿನ ದಂದು ಅತಿಥಿಯಾಗಿ ಆಗಮಿಸಿದ ಆ ತೇಜಃ ಪುಂಜವದನಾರವಿಂದದ ತರುಣ ನನ್ನು ಕಂಡು ಮನೆಯ ಯಜಮಾನಿಗೆ ಅಪಾರ ಸಂತೋಷವಾಯಿತು ಅವರು ಈ ತರುಣನಿಗೆ ಯಥೇಚ್ಛವಾದ ತಂಗಳನ್ನವನ್ನಿಟ್ಟು "ಹೊಟ್ಟೆ ತುಂಬ ಊಟಮಾಡಪ್ಪ" ಎಂದರು. ಒಂದೇಒಂದು ತುತ್ತು ಗಂಟಲಲ್ಲಿಳಿ ಕೂಡಲೇ ವೆಂಕಟರಮಣನಿಗೆ ಅಪೂರ್ವ ತೃಪ್ತಿಯಾಯಿತು. ಅವನು ಸಾಕು ಎಂದು ಎಷ್ಟು ಹೇಳಿದರೂ ಆ ತಾಯಿ ಬಲವಂತಮಾಡಿ "ಎಲ್ಲವನ್ನೂ ಊಟ ಮಾಡಲೇಬೇಕು" ಎಂದರು. ವೆಂಕಟರಮಣ ಎಲ್ಲವನ್ನೂ ಉಂಡು ಬಳಿಕ ಭಾಗವತರ ಬಳಿಗೆ ಬಂದು, ಅವರ ಸಂಶಯ ನಿವಾರಣೆ ಮಾಡಬೇಕೆಂದು ಯೋಚಿಸಿ "ಸ್ವಾಮಿ, ಪ್ರಯಾಣ ಕಾಲದಲ್ಲಿ ಸಾಮಾನೆಲ್ಲ ಕಳುವಾಗಿ ಹೋಯಿತು. ಮುಂದಿನ ಪ್ರಯಾಣಕ್ಕೆ ಹಣವಿಲ್ಲವಾಗಿದೆ. ಈ ಕರ್ಣಾ ಭರಣ ಇಟ್ಟುಕೊಂಡು ನಾಲ್ಕುರೂಪಾಯಿ ದೊರೆಯುವಂತೆ ಮಾಡಿದರೆ ತುಂಬ ಉಪಕಾರಮಾಡಿದಂತಾಗುತ್ತದೆ" ಎಂದನು. ಭಾಗವತರು ಕೈಗೆತ್ತಿಕೊಂಡು, ಚೆನ್ನಾಗಿ ಪರೀಕ್ಷಿಸಿ, ಹರಳು ಅಚ್ಚಕೆಂಪೆಂದು ಚಿನ್ನದಲ್ಲಿ ಕೂಡಿಸಿದ್ದೆಂದು ತಿಳಿದುಕೊಂಡರು. ವೆಂಕಟರಮಣನ ವಿಳಾಸವನ್ನು ಗುರುತು ಹಾಕಿಕೊಂಡು, ತಮ್ಮ ವಿಳಾಸವನ್ನು ಬರೆದುಕೊಟ್ಟು ಅವನಿಗೆ ಬೇಕಾಗಿದ್ದ ನಾಲ್ಕು ರೂಪಾಯಿ ಗಳನ್ನು ಕೊಟ್ಟರು.

ಶ್ರೀ ಮುತ್ತುಕೃಷ್ಣ ಭಾಗವತರು, ಅವರ ಧರ್ಮಪತ್ನಿಯವರು ಎಲ್ಲ ಅತಿಥಿ ಗಳೂ ಭಗವಂತನ ಸ್ವರೂಪ* ಎಲ್ಲರೂ ವಾಸುದೇವನ ಸ್ವರೂಪರು † ಎಂದು ಪರಿಪೂರ್ಣವಾಗಿ ನಂಬಿದವರು. ಅತಿಥಿಯಾಗಿ ಬಂದ ವೆಂಕಟರಮಣನಿಗೆ

---

* ಅತಿಥಿ ದೇವೋ ಭವ_ವೇದ

† ವಾಸುದೇವ ಸ ರ್ವಮಿತಿ—ಗೀತಾ.

ಮಧ್ಯಾಹ್ನ ಭೋಜನ ಮಾಡಿಸಿದುದೇ ಅಲ್ಲದೆ ಶ್ರೀ ಕೃಷ್ಣನ ನೈವೇದ್ಯಕ್ಕೆಂದು ಮಾಡಿದ್ದ ಬಗೆಬಗೆಯ ಭಕ್ಷ್ಯ ಭೋಜ್ಯಾದಿಗಳನ್ನು ಒಂದು ಪೊಟ್ಟಣದಲ್ಲಿ ಕಟ್ಟಿ ನೈವೇದ್ಯಕ್ಕೆ ಮೊದಲೇ ಈ ತರುಣನಿಗೆ ಕೊಟ್ಟುಬಿಟ್ಟರು. ವೆಂಕಟರಮಣ ತಾನು ಹೊರಟು ಹೋಗುವ ಪೂರ್ವ ಹಿಂದಿರುಗಿ ಇತ್ತಕಡೆಗೆ ಬರುವಾಗ ಕರ್ಣಾಭರಣಗಳನ್ನು ಬಿಡಿಸಿಕೊಳ್ಳುವುದಾಗಿ ಭರವಸೆ ಇತ್ತನು. ಆದರೆ ಭಾಗವತರ ಮನೆಯಿಂದ ರೈಲ್ವೆ ನಿಲ್ದಾಣಕ್ಕೆ ಹೊರಡುವುದೇ ತಡ ಅವರು ಬರೆದುಕೊಟ್ಟಿದ್ದ ಚೀಟಿಯನ್ನು ಚೂರುಚೂರಾಗಿ ಹರಿದು ಬಿಸಾಡಿದನು. ಕರ್ಣಾಭರಣಗಳನ್ನು ಮತ್ತೆ ಪಡೆಯಬೇಕೆಂಬ ವಿಚಾರವನ್ನೇ ಬಿಟ್ಟುಬಿಟ್ಟನು. ಕೈಯ್ಯಲ್ಲಿ ಸಿಹಿ ತಿಂಡಿಪೊಟ್ಟಣ, ರೈಲು ಚಾರ್ಜಿಗೆ ಬೇಕಾದ ಹಣ ಇಷ್ಟನ್ನು ತೆಗೆದುಕೊಂಡು ನಿಲ್ದಾಣಕ್ಕೆ ಬಂದನು. ಆ ರಾತ್ರಿ, ಆ ರೈಲ್ವೆ ನಿಲ್ದಾಣದಲ್ಲಿಯೇ ಮಲಗಿದ್ದು ಮರುದಿನ ಬೆಳಿಗ್ಗೆ (೧೮೯೬ನೆಯ ಸೆಪ್ಟೆಂಬರ್ ೧ನೆಯ ತಾರೀಖು) ನಾಲ್ಕಾಣೆ ಕೊಟ್ಟು ಟಿಕೆಟ್ಟೊಂದನ್ನು ಪಡೆದು, ರೈಲುಹತ್ತಿ ಒಂದೆರಡು ಗಂಟೆಯಲ್ಲಿಯೇ ತಿರುವಣ್ಣಾಮಲೆ ತಲ್ಪಿದನು.

ನದಿಯು ಸಾಗರವನ್ನು ಸೇರಿದಂತಾಯಿತು. ಅಗಲಿದ ಕರು ಹಸುವನ್ನು ಕೂಡಿದಂತಾಯಿತು. ಹೆಣ್ಣುಮಗಳು ತನ್ನ ತವರು ಮನೆಗೆ ಬಂದಂತಾಯಿತು.



೩

## ತಂದೆಯ ಸನ್ನಿಧಿಗೆ

೧೮೯೬ನೆಯ ಸೆಪ್ಟೆಂಬರ್ ೧ನೆಯ ತಾರೀಖು. ಈ ಮಂಗಳದಿನದ ಸುಪ್ರಭಾತದ ಸುಪ್ರಸನ್ನ ಸಮಯದಲ್ಲಿ ವೆಂಕಟರಮಣ ತಿರುವಣ್ಣಾಮಲೆಗೆ ತನ್ನ ಮಹಾ ಜೀವನದ ಮಹಾ ಗುರಿಯ ಮೂಲಕ್ಕೆ ಬಂದನು.

ಹೊಸದಿನದ ಹೊಂಬೆಳಗು ಪೂರ್ವದಿಗ್ವಲಯದಲ್ಲಿ ಹೊಮ್ಮಿ ಹೊಮ್ಮಿ ಬರುತ್ತಲಿತ್ತು. ಸೃಷ್ಟಿಯಲ್ಲಿ ನವೋದಯದ ಉತ್ಸಾಹಪೂರ್ಣ ವಾತಾವರಣ ಹಬ್ಬಿ ನಿಂತಿತ್ತು.

ಅರುಣಾಚಲೇಶ್ವರನ ಪವಿತ್ರ ದೇವಾಲಯವು ಚೆಲುವಿನ ನೆಲೆವೀಡಿನ ಮಹೋನ್ನತ ಸ್ಥಾನದಲ್ಲಿ ವಿರಾಜಿಸುತ್ತಿದೆ. ಅದರ ಗಗನ ಚುಂಬಿಯಾದ ರಮಣೀಯ ಶಿಖರವು ಬಹುದೂರದಿಂದಲೇ ಭಕ್ತರನ್ನೂ, ಪ್ರವಾಸಿಗರನ್ನೂ ಆಕರ್ಷಿಸುತ್ತಿದೆ. ಅರುಣಾಚಲೇಶ್ವರನ ದೇವಾಲಯಕ್ಕೆ ಹೋಗುವ ಮಾರ್ಗದ ಇರ್ಕಡೆಗಳಲ್ಲಿ ಸರ್ವದಾ ತಣ್ಣೆಳಲನ್ನು ಬೀರುತ್ತಿರುವ ವನರಾಜಿ. ಪಕ್ಕದಲ್ಲಿಯೇ ಚಿಕ್ಕಪುಟ್ಟ ಜಲಪ್ರವಾಹಗಳು ಹೆಮ್ಮೆಯಿಂದ ಹರಿಯುತ್ತಿವೆ. ಹಚ್ಚನೆಯ ಹಸಿರು ಎಲ್ಲೆಲ್ಲೂ ಹಬ್ಬಿ ಕಣ್ಣಿಗೆ ರಸದೂಟವನ್ನುಂಟುಮಾಡುತ್ತಿದೆ. ತಪಸಿಗಳ ನೆಲೆಗೆ ಅನುಕೂಲವಾದ ಸಣ್ಣಪುಟ್ಟ ಗುಹೆಗಳು ಅಲ್ಲಿವೆ.

ಅರುಣಗಿರಿಯ ಪೂರ್ವದಿಕ್ಕಿನಲ್ಲಿ ತಿರುವಣ್ಣಾಮಲೆಯ ಊರು; ಊರಿಗೆ ಮೂಡಲಲ್ಲಿ ಇಂದ್ರತೀರ್ಥ; ಅಯ್ಯಂಕುಳಂ ಕೆರೆ; ದೂರದಲ್ಲಿ ಕಂಗೊಳಿಸುವ ಪರ್ವತಶ್ರೇಣಿ ಇವೆಲ್ಲ ಸೃಷ್ಟಿ ಸೌಂದರ್ಯದ ಹಿರಿಮೆಯನ್ನು ಮತ್ತಷ್ಟು ಪರಿ ಪುಷ್ಟಿಗೊಳಿಸಿವೆ. ಉತ್ತಮ ಸನ್ನಿವೇಶವು ವಿದ್ಯಾರ್ಥಿಗಳಿಗೆ ವಿದ್ಯೆಯನ್ನೂ, ಕವಿಗಳಿಗೆ ಸ್ಫೂರ್ತಿಯನ್ನೂ, ಯೋಗಿಗಳಿಗೆ ಶಾಂತಿಯನ್ನೂ, ಕಲೆಗಾರರಿಗೆ ನವೋತ್ಸಾಹವನ್ನೂ ಉಂಟುಮಾಡುವುದೆಂಬುದು ಅನುಭವ ಸಿದ್ಧಾಂತವಾಗಿದೆ.

ವೆಂಕಟರಮಣ ರೈಲಿನಿಂದಿಳಿದವನೇ ಕತ್ತೆತ್ತಿ ನೋಡಿದ. ದೂರದಿಂದಲೇ ಅರುಣಾಚಲೇಶ್ವರನ ಭವ್ಯದೇವಾಲಯದ ಗೋಪುರ ಕಣ್ಣುಕೋರೈಸು

ತ್ತಿತ್ತು. ಅವನ ಹೃದಯ ಭಕ್ತಿಯ ಆವೇಶದಿಂದ ತುಂಬಿಹೋಯಿತು. ಆ ಕ್ಷಣದಲ್ಲಿ ಅವನು ತನ್ನನ್ನು ಮರೆತುಬಿಟ್ಟ. ಯಾವಾಗ ಸ್ವಾಮಿಯ ಸನ್ನಿಧಿಗೆ ತೆರಳುವೆನೋ ಎಂಬ ಆತುರ ಕ್ಷಣಕ್ಷಣಕ್ಕೂ ಹೆಚ್ಚುತ್ತಿತ್ತು. ಜೊತೆಗೆ ಅವನಿಗೆ ಅನಿರ್ವಚನೀಯವಾದ ಆನಂದವಾಗಿತ್ತು. ತನ್ನ ಅಂತರಂಗದಲ್ಲಿದ್ದ ಬಹುದಿನದ ಬಯಕೆ ಕೈಗೂಡಿದಾಗ ಯಾರಿಗೆ ತಾನೆ ಹೀಗಾಗದು ?

ವೆಂಕಟರಮಣನ ಕಾಲುಗಳು ಅತಿವೇಗವಾಗಿ ಅವನ ದೇಹವನ್ನು ಭಗವಾನ್ ಅರುಣಾಚಲೇಶ್ವರ ದೇವಾಲಯದತ್ತ ಕೊಂಡೊಯ್ಯುತ್ತಿದ್ದುವು. ಸ್ವಲ್ಪಹೊತ್ತಿನಲ್ಲಿ ಅವನು ದೇವಾಲಯಕ್ಕೆ ಬಂದೇ ಬಿಟ್ಟ.

ಅರುಣಾಚಲೇಶ್ವರ ಸ್ವಾಮಿಯ ದೇವಾಲಯದ ನಾಲ್ಕು ಕಡೆಗಳಲ್ಲಿಯೂ ಮಹಾದ್ವಾರಗಳಿವೆ. ಈ ದೇವಾಲಯವನ್ನು ಪೂರ್ವದಲ್ಲಿ ವೆಲ್ಲಾಲುರಾಜ ಎಂಬಾತ ಕಟ್ಟಿಸಿದನೆಂಬ ಪ್ರತೀತಿ ಇದೆ. ಶಿಥಿಲವಾದ ದ್ವಾರಗಳು ಇತ್ತೀಚಿಗೆ ಪುನರ್ನಿರ್ಮಿತವಾಗಿವೆ. ದೇವಾಲಯ ಅತ್ಯಂತ ವಿಶಾಲವಾಗಿದೆ. ಇದರ ಉದ್ದ ೧೪೪೦ ಅಡಿ; ಅಗಲ ೭೫೦ ಅಡಿ. ಇದರ ಪ್ರಾಚ್ಯಭಾಗದ ಮಹಾ ಗೋಪುರವು ೧೩ ಅಂತಸ್ತುಗಳಿಂದ ಕೂಡಿ ೨೧೭ ಅಡಿ ಎತ್ತರವಾಗಿದೆ.

ದೇವಾಲಯದ ಪ್ರಥಮ ಪ್ರಾಕಾರದ ಉತ್ತರದಿಕ್ಕಿನಲ್ಲಿ ಸಾವಿರ ಕಂಬದ ಮಂಟಪವಿದೆ. ಇಂತಹ ಸಾವಿರ ಕಂಬಗಳ ಮಂಟಪವೊಂದು ಮಧುರೆಯ ಮೀನಾಕ್ಷಿದೇವಿಯ ಗುಡಿಯಲ್ಲಿಯೂ ಉಂಟು. ನೆಲಕ್ಕೆ ಚಪ್ಪಡಿ ಕಲ್ಲುಗಳನ್ನು ಹಾಕಲಾಗಿದೆ. ಇದರ ಮಧ್ಯದಲ್ಲಿ ಶಿಲಾವೇದಿಕೆಯೊಂದು ಕಂಗೊಳಿಸುತ್ತಿದೆ. ಇದಕ್ಕೆ ನೈರುತ್ಯದಲ್ಲಿ ಪಾತಾಳ ಲಿಂಗನ ಗುಡಿಯುಂಟು.

ಒಟ್ಟಿನಲ್ಲಿ ದೇವಾಲಯದ ವಾತಾವರಣದಲ್ಲಿ ಪವಿತ್ರತೆಯ ಹೊನಲು ತಾನೇತಾನಾಗಿ ಹರಿಯುತ್ತಿದೆ. ಎಡಬಿಡದೆ ಬರುವ ಭಕ್ತವೃಂದ; ನಿರಂತರ ನಡೆವ ಪೂಜಾದಿ ಮಂಗಳ ಕಾರ್ಯಗಳ ಸಮಯದಲ್ಲಿ ಬಾರಿಸುವ ದೇವಾಲಯದ ಘಂಟಾನಾದ; ಓಲಗದ ಮಂಗಳ ನಿಸ್ವನ; ವೇದ ಮಂತ್ರಗಳ ಘೋಷಣೆಗಳು ಅಲ್ಲಿಗೆ ಬರುವ ಭಕ್ತರನ್ನೆಲ್ಲ ಮೈಮರೆಯಿಸುತ್ತವೆ.

ದೇವಾಲಯದ ಮೂರು ಪ್ರಾಕಾರದ ಮಹಾದ್ವಾರಗಳು ಗರ್ಭಗಾರ್ಹದ ಬಾಗಿಲು ತೆರೆದಿದ್ದವು. ಅಲ್ಲಿ ಪುನರ್ನಿರ್ಮಾಣ ಕಾರ್ಯ ಸಾಗುತ್ತಲಿದ್ದು ದರಿಂದ ಆ ಸಮಯದಲ್ಲಿ ಅಲ್ಲಿ ಯಾರೂ ಸುಳಿಯುತ್ತಿರಲಿಲ್ಲ. ಆದುದರಿಂದ ವೆಂಕಟರಮಣ ಯಾವ ಆತಂಕವೂ ಇಲ್ಲದೆ ಗರ್ಭಗುಡಿಯನ್ನು ನೇರವಾಗಿ ಪ್ರವೇಶಿಸಿ ಅರುಣಾಚಲೇಶ್ವರ ಲಿಂಗಮೂರ್ತಿಯ ಮುಂದೆ ಭಕ್ತಿ ಪರವಶನಾಗಿ ನಿಂತು ಕೈ ಜೋಡಿಸಿ,

ನಿನ್ನ ಕರೆಗಿದೋ ತಲೆಯಬಾಗಿ ಬಂದೆ
ಚನ್ನ, ಸರ್ವರ ತೊರೆದು ಧಾವಿಸಿದೆ ನಿಂದೆ

"ಓ, ಅರುಣಾಚಲೇಶ, ನೀನು ಕರುಣಾಮಯಮೂರ್ತಿ. ಒಮ್ಮೆ ನೀನು ನನ್ನನ್ನು ನಿನ್ನವನೆಂದು ಪರಿಗಣಿಸಿದ ಮೇಲೆ ನಾನು ಪ್ರೀತಿ ವಿರಹಿತನಾಗಿದ್ದರೂ ಸಹ ನನ್ನನ್ನು ನೀನು ಅದೆಂತು ಪರಿತ್ಯಜಿಸುವೆ ? ನನ್ನಲ್ಲಿ ಪ್ರೀತಿಯನ್ನು ತುಂಬಿ ಅಗ್ನಿಯ ಬಳಿ ಮೇಣದಬತ್ತಿ ಕರಗುವಂತೆ ನಿನ್ನ ಬಳಿ ನಾನು ಕರಗುವಂತೆ ಮಾಡದೇ ಇರುವುದು ಸಾಧ್ಯವೇ ? ಓ, ಮಂಗಳ ಮೂರ್ತಿ, ನಿನ್ನ ಸಂತೋಷ ನನ್ನದಾಗಲಿ. ಅದೇ ನನ್ನ ಜೀವಿತದ ಪರಮ ಮಂಗಳ ಪೂರ್ಣವಾದ ಆನಂದ. ಓ, ನನ್ನ ಜೀವಿತೇಶ ಈ ಪರಮಾನಂದವನ್ನು ಕರುಣಿಸು"* ಎಂದು ಆರ್ತಧ್ವನಿಯಿಂದ ಬೇಡಿಕೊಂಡನು. ಅವನ ಕಣ್ಣುಗಳಲ್ಲಿ ಆನಂದ ಬಾಷ್ಪಗಳು ತುಂಬಿದ್ದವು. ತಕ್ಷಣದಲ್ಲಿಯೇ ಅವನ ದೈಹಿಕ ಮತ್ತು ಮಾನಸಿಕ ವೇದನೆಗಳು ಪ್ರಖರ ಸೂರ್ಯ ಪ್ರಕಾಶದ ಮುಂದಿನ ಮಂಜಿನಂತೆ ಮರೆಯಾದವು.

ಸ್ವಲ್ಪ ಹೊತ್ತಿನ ಮೇಲೆ ಅವನಿಗೆ ಎಚ್ಚರ ಬಂದಿತ್ತು. ದೇವಾಲಯದಿಂದ ಹೊರಹೊರಟವನು ಊರನ್ನೆಲ್ಲ ಗೊತ್ತುಗುರಿಯಿಲ್ಲದೆ ಸುತ್ತಿ, ಕೊನೆಗೆ ಅಯ್ಯಂಕುಳ ಕೆರೆಯ ಹತ್ತಿರ ಬಂದನು. ಕೃಷ್ಣಭಾಗವತರ ಮನೆಯಲ್ಲಿ ಕಟ್ಟಿಕೊಟ್ಟಿದ್ದ ಸಿಹಿತಿನಿಸುಗಳನ್ನು ತಿನ್ನಬೇಕೆಂದು ಗಂಟು ಬಿಚ್ಚಿ

* 'ಅರುಣಾಚಲ ಪದಿಕಂ'ದ ಒಂದು ಶ್ಲೋಕದ ಭಾವಾನುವಾದ.

ದನು. ಆದರೆ. 'ಈ ದೇಹವೆಂಬ ಕಟ್ಟಿಗೆಗೆ ಈ ಸಿಹಿ ತಿನಿಸುಗಳೇಕೆ ?' ಎಂದು ಚಿಂತಿಸಿ ಅವುಗಳನ್ನು ಎಸೆದು ಬಿಟ್ಟನು.

ವೆಂಕಟರಮಣನಿಗೆ ಆಹಾರದ ಚಿಂತೆ ಆಗಲೇ ಮರೆಯಾಗಿತ್ತು. 'ಏನು ತಿನ್ನಬೇಕು ? ಏನು ಹೊದೆಯಬೇಕು?' ಎಂಬ ಆಲೋಚನೆ ಎಂದೋ ಮರೆಯಾಗಿತ್ತು. ಅವುಗಳ ಅವಶ್ಯಕತೆಯೂ ಅವನಿಗೆ ತೋರಿ ಬರಲಿಲ್ಲ. ತನ್ನದು ಎನ್ನುವ ಸ್ಥಳ ಅವನಿಗೆ ಇರಲಿಲ್ಲ. ಆದರೆ, ಎಲ್ಲವೂ ಅವನ ಸ್ಥಳವೇ. ಅನ್ನವನ್ನು ಇಕ್ಕಿ ನನ್ನಿಯನು ನುಡಿಯುವವರೆಲ್ಲರೂ ಅವನ ಬಂಧು ಬಳಗದವರು. ತನ್ನವರು ಎಂಬ ಸಂಕುಚಿತ ಭಾವನೆ ಮರೆಯಾಗಿ ಎಲ್ಲರೂ ತನ್ನವರೆ ಎಂಬ ವಿಶಾಲಭಾವನೆ ಮೂಡಿತು. ಭೂತಲವೇ ಹಾಸಿಗೆ. ಆಕಾಶವೇ ಹೊದಿಕೆ. ತರುಮೂಲಾದಿಗಳು, ಪಶುಪಕ್ಷಿಗಳೇ ಅವನ ಮಿತ್ರರಾದರು.

ಕೆರೆಯಿಂದ ಹಿಂತಿರುಗುತ್ತಿದ್ದಾಗ ವೆಂಕಟರಮಣನನ್ನು ಕಂಡ ಅಪರಿಚಿತರೊಬ್ಬರು "ಏನಯ್ಯ, ನಿನ್ನ ಜುಟ್ಟು ತೆಗೆಯುವುದಿಲ್ಲವೇ ?" ಎಂದು ಕೇಳಿದರು.

"ತೆಗೆಸಬೇಕಾಗಿದೆ" ಎಂದ ವೆಂಕಟರಮಣ. ಸರಿ, ಆ ಅಪರಿಚಿತ ವೆಂಕಟರಮಣನನ್ನು ಜೊತೆಗೆ ಕ್ಷೌರಿಕನ ಬಳಿಗೆ ಕರೆದುಕೊಂಡು ಹೋಗಿ, ಜುಟ್ಟನ್ನು ತೆಗೆಯಿಸಿ ಕಳುಹಿಸಿದನು. ವೆಂಕಟರಮಣನ ತಲೆಗೂದಲು ಅವನ ಮುಖಕ್ಕೆ ಕೊಡುತ್ತಿದ್ದ ಸೌಂದರ್ಯ ಈಗ ಅರೆಕ್ಷಣದಲ್ಲಿ ಕಣ್ಮರೆಯಾಗಿತ್ತು. ಸನ್ಯಾಸಿಯಾಗುವವನಿಗೆ ಸೌಂದರ್ಯದ ಅಗತ್ಯವೆಲ್ಲಿ ?

ಮುಂಡನಕರ್ಮವಾದ ನಂತರ ವೆಂಕಟರಮಣ ತನ್ನ ಬಟ್ಟೆಗಳನ್ನೆಲ್ಲ ಚಿಂದಿಚಿಂದಿಯಾಗಿ ಹರಿದು ಒಂದು ತುಂಡನ್ನು ಕೌಪೀನವಾಗಿ ಧರಿಸಿದನು. ಬಳಿಯಲ್ಲಿ ಉಳಿದಿದ್ದ ಮೂರುವರೆ ರೂಪಾಯಿಗಳನ್ನು ಬಿಸುಟಿದನು. ಯಜ್ಞೋಪವೀತವನ್ನು ತೆಗೆದು ಹಾಕಿದನು. ಜಗತ್ತಿನ ಜಂಜಡದ ಈ ಎಲ್ಲ ಕುರುಹುಗಳು ಒಮ್ಮೆ ಮಾಯವಾದವು.

ಮಾನವನಿಗೆ ಆಸೆಯೇ ಸಕಲ ದುಃಖಗಳ ಮೂಲ. ದೇಹ ಸೌಖ್ಯ ಆಸೆಯ ನೆಲೆ. ಇದನ್ನು ಪರಿತ್ಯಜಿಸಲೆಂದೇ ಕೌಪೀನ ಧಾರಣಮಾಡಿ ತನ್ನ

ಬಳಿಯಲ್ಲಿದ್ದ ಹಣವನ್ನು ಬಿಸುಟಿದ್ದು. ಇನ್ನು ಯಜ್ಞೋಪವೀತವು ಬ್ರಾಹ್ಮಣ್ಯದ ಕುರುಹು. ಜಾತೀಯತೆಯ ಸಂಕುಚಿತ ಮನೋಭಾವದಿಂದ ಅತಿದೂರವಾಗಿದ್ದ ವೆಂಕಟರಮಣ ಇನ್ನು ಅದರ ಉಪಯೋಗವನ್ನು ಕಾಣದೆ ಪರಿತ್ಯಜಿಸಿ, ಸತ್ಯವೊಂದರಲ್ಲೇ ಮನಸಿಟ್ಟು ಹದಿನಾರಾಣೆ ಸನ್ಯಾಸಿಯಾದನು. ಮೋಡಗಳ ದೆಸೆಯಿಂದ ಬಿಡುಗಡೆಯಾದ ಸೂರ್ಯನಂತೆ ಕಂಗೊಳಿಸಿದನು. ಗಿಡದಲ್ಲಿನ ಹಣ್ಣು ಕಳಿತ ಮೇಲೆ ತೋಟದ ಸಂಬಂಧವನ್ನು ಅದು ಕಳೆದುಕೊಳ್ಳುವುದು ಸಹಜವಲ್ಲವೇ ?

ಸನ್ಯಾಸಿಯ ಸಕಲ ಚಿನ್ಹೆಗಳೂ ವೆಂಕಟರಮಣನಲ್ಲಿ ನೆಲೆಗೊಂಡವು. ಅವನಿಗೆ ಗೋಚರಿಸದ ಮಹಾ ಬದಲಾವಣೆಯೊಂದು ತಾನೇ ತಾನಾಗಿ ರೂಪ ಗೊಳ್ಳುತ್ತಲಿತ್ತು. ಈ ಜಗತ್ತಿನ ಯಾವ ಪರಿವೆಯೂ ಇಲ್ಲದೆ ವೆಂಕಟರಮಣ ಕೆರೆಯಿಂದ ಅರುಣಾಚಲೇಶನ ದೇವಾಲಯಕ್ಕೆ ಹಿಂದಿರುಗಿ ಅಲ್ಲಿನ ಸಾವಿರ ಕಂಭಗಳ ಮಂಟಪದಲ್ಲಿ ಧ್ಯಾನಾಸಕ್ತನಾದನು. ತಂದೆಯ ಸನ್ನಿಧಿಯಲ್ಲಿ ಸತ್ಯದ ಸಾಕ್ಷಾತ್ಕಾರಕ್ಕಾಗಿ ತದೇಕಚಿತ್ತನಾಗಿ ಅಂತರ್ಮುಖಿಯಾದನು. ವಿವೇಕಿಯಾದ ಮಾನವನು ಯಾವ ಬ್ರಹ್ಮಸಾಕ್ಷಾತ್ಕಾರಕ್ಕಾಗಿ ಪ್ರಯತ್ನಿಸ ಬೇಕೆಂದು ವೇದ ಶಾಸ್ತ್ರಗಳು ಹೇಳುವುವೋ ಆ ದಾರಿಯಲ್ಲಿ ಮುಂದುವರಿದನು.



## ೭

## ಚಿಕ್ಕಸ್ವಾಮಿ

ಸುಕ್ಷೇತ್ರ ತಿರುವಣ್ಣಾಮಲೆಯ ಬೀದಿಗಳಲ್ಲಿ ವೆಂಕಟರಮಣನ ತಿರು ಗಾಟ ಊರಿನ ಜನರ ಗಮನವನ್ನು ಸೆಳೆಯಿತು. ಮೌನವಾಗಿ ತಿರುಗುತ್ತಿದ್ದ ಈ ತರುಣ ಸನ್ಯಾಸಿ ಆ ಊರಿನ ಯುವಕರಲ್ಲಿ ಬಹಳ ಕುತೂಹಲವನ್ನು ಕೆರಳಿ ಸಿದನು. ನಾಲ್ಕೈದು ವರ್ಷಗಳ ಕೆಳಗೆ ಇದೇ ತಿರುವಣ್ಣಾಮಲೆಯ ಬೀದಿಗಳಲ್ಲಿ ಶೇಷಾದ್ರಿಸ್ವಾಮಿ ಎಂಬುವರೊಬ್ಬರು ತರುಣ ಜನಸ್ತೋಮದ ಕೀಟಲೆಗೆ ಗುರಿಯಾಗಿದ್ದರು. ಅವರು ಸರ್ವದಾ ಮೌನದಿಂದಿರುತ್ತಿದ್ದುದ ರಿಂದ ತರುಣವೃಂದವೆಲ್ಲ ಅವರನ್ನು 'ಹುಚ್ಚ' ನೆಂದು ಭಾವಿಸಿತ್ತು. ಇದೇ ಸ್ವಾಮಿಗಳು ಮುಂದೆ ಕೆಲವು ಕಾಲದನಂತರ ಮಹಾಜ್ಞಾನಿಗಳೆಂದು ಹೆಸರು ಪಡೆದರು. ಇಂದೂ ಸಹ ವೆಂಕಟರಮಣನ ಮೌನ ಧ್ಯಾನಗಳನ್ನು ಕಂಡ ತರುಣರು ಆತನನ್ನು 'ಚಿಕ್ಕ ಶೇಷಾದ್ರಿ' ಯೆಂದು ಸಂಬೋಧಿಸ ಲಾರಂಭಿಸಿದರು.

ಒಂದು ದಿವಸ ವೆಂಕಟರಮಣ ಎಂದಿನಂತೆ ಧ್ಯಾನಾಸಕ್ತನಾಗಿದ್ದಾಗ ತುಂಟ ತರುಣರ ತಂಡವು ಈತನ ಮೇಲೆ ಕಲ್ಲಿನ ಮಳೆಯನ್ನೇ ಸುರಿಸಿತು. ಆದರೆ, ದೈವವಶಾತ್ ಯಾವ ಅಪಾಯವೂ ಸಂಭವಿಸಲಿಲ್ಲ. ಇಷ್ಟೇ ಅಲ್ಲ ಒಂದು ಕಲ್ಲುಕೂಡ ಅವನಿಗೆ ತಗುಲಲಿಲ್ಲ. ಭಗವಂತನನ್ನು ಮರೆಹೊಕ್ಕ ಭಕ್ತರನ್ನು ಕಾಪಾಡುವ ಭಾರ ಭಗವಂತನದೇ ಅಲ್ಲವೇ ? ಹರನ ಕಂಡವರಿಗೆ ಮರಣದ ಭಯವೆಲ್ಲಿ ?

ವೆಂಕಟರಮಣನ ತಪಸ್ಸಿಗೆ ಒಂದಲ್ಲೊಂದು ತೊಂದರೆ ಉದ್ಭವಿಸುತ್ತಲೇ ಇತ್ತು. ಆತನು ಕುಳಿತುಕೊಳ್ಳುತ್ತಿದ್ದ ಸಹಸ್ರ ಕಂಭದ ಮಂಟಪವನ್ನು ತ್ಯಜಿಸಿ ಬೇರೊಂದು ಸ್ಥಳಕ್ಕೆ ತೆರಳಬೇಕಾಗಿ ಬಂದಿತು. ಪಾತಾಳಲಿಂಗದ ಕಗ ತ್ತಲೆಯ ನೆಲಮಾಳಿಗೆಯನ್ನು ತನ್ನ ತಪಸ್ಸಿಗೆ ಆರಿಸಿಕೊಂಡನು. ಇದು ಬಿಸಲಿನಿಂದ ಬೆಂಕಿಗೆ ಬಿದ್ದಹಾಗಾಯಿತು. ಈ ಸ್ಥಳವು ದುಷ್ಟ ಕ್ರಿಮಿ-ಕೀಟಗಳ

ಆವಾಸಸ್ಥಾನವಾಗಿತ್ತು. ದೀಪದ ಮುಖವನ್ನೇ ಈ ಸ್ಥಳ ಕಂಡಿರಲಿಲ್ಲ. ಇಂತಹ ಘೋರವಾದ ಸ್ಥಳವನ್ನು ವೆಂಕಟರಮಣ ತಪಸ್ಸಿಗಾಗಿ ಆಯ್ದುಕೊಂಡಿದ್ದ. ಅಲ್ಲಿ ಬೀಡು ಬಿಟ್ಟಿದ್ದ ಜೇನುನೊಣ, ದುಂಬಿ, ಕಟ್ಟಿರುವೆ, ಸೊಳ್ಳೆ ಮೊದಲಾದ ದುಷ್ಟ ಕ್ರಿಮಿಕೀಟಗಳು ವೆಂಕಟರಮಣನ ದೇಹದ ರಕ್ತವನ್ನು ಧಾರಾಳವಾಗಿ ಹೀರಲಾರಂಭಿಸಿದ್ದವು. ಕಾಲು, ತೊಡೆ ಮೊದಲಾದ ಕಡೆಗೆ ತೀವ್ರವಾದ ಗಾಯಗಳಾಗಿ ಕೀವು, ರಕ್ತ ಸೋರಲಾರಂಭಿಸಿತು ಇದರ ಜೊತೆಗೆ ತುಂಟರ ತಂಡದವರ ಗಲಾಟೆ ಮುಂಚಿನಂತೆಯೇ ಇತ್ತು. ಕತ್ತಲೆಯ ಭಯದಿಂದ ಪಾತಾಳಲಿಂಗಕ್ಕೆ ಇಳಿಯಲು ಹೆದರಿ ಆ ತುಂಟರು ಒಡೆದ ಮಡಕೆಗಳನ್ನು ಎಸೆಯುತ್ತಿದ್ದರು. ಕಲ್ಲುಗಳನ್ನು ಬೀರುವುದು ಸಹ ನಿಂತಿರಲಿಲ್ಲ. 'ಹರ ತನ್ನ ಭಕ್ತರ ಮನವನ್ನು ತೆರೆದು ನೋಡುವ, ಅರೆದು ನೋಡುವ.' ಎಂಬ ಶರಣರ ಮಾತು ಇಲ್ಲಿ ಅನುಭವಕ್ಕೆ ಬಂದಿತು.

ಒಂದು ದಿನ ರತ್ನಮ್ಮಾಳ್ ಎಂಬ ಭಕ್ತೆ, ತರುಣ ತಪಸ್ವಿಗಳ ಬಳಿಗೆ ಆಹಾರ ತೆಗೆದುಕೊಂಡು ಅವರಿಗೆ ನೀಡಲೆಂದು ಹೋಗಿದ್ದಾಗ ಅವರಿಗೆ ಉಂಟಾಗುತ್ತಿದ್ದ ವಿಪತ್ತುಗಳನ್ನು ಕಂಡು ತಪಸ್ವಿ ವೆಂಕಟರಮಣನನ್ನು ತನ್ನ ಮನೆಗೆ ಬರುವಂತೆ ಆಹ್ವಾನಿಸಿದಳು. ತಪಸ್ವಿ ಕಣ್ತೆರೆಯಲಿಲ್ಲ. ರತ್ನಮ್ಮಾಳ್ ಕೊನೆಗೆ ಬಿಟ್ಟು ಹೋದ ನೂತನ ವಸ್ತ್ರವನ್ನೂ ಸಹ ಅವನು ಕಣ್ಣೆತ್ತಿ ನೋಡಲಿಲ್ಲ. ವೆಂಕಟರಮಣನ ಭೀಷ್ಮ ನಿರ್ಧಾರ ಅಚಲವಾಗಿತ್ತು. ಅಮೃತದ ಸವಿಗಂಡವನು ಅಂಬಲಿಯ ಬಯಸುವನೇ?

ಈಗಂತೂ ವೆಂಕಟರಮಣ ತಿರುವಣ್ಣಾಮಲೆಯಲ್ಲಿ ಎಲ್ಲರ ಗಮನವನ್ನು ಸೆಳೆದಿದ್ದನು. ಅವನ ತಪಶ್ಚರ್ಯ ಎಲ್ಲರನ್ನೂ ಬೆರಗುಗೊಳಿಸಿತ್ತು. ಈಗ ಈತನನ್ನು ಎಲ್ಲರೂ 'ಚಿಕ್ಕಸ್ವಾಮಿ' ಎಂದು ಕರೆಯುತ್ತಿದ್ದರು. 'ಚಿಕ್ಕ ಸ್ವಾಮಿ'ಯನ್ನು ಅರಿಯದವರೇ ತಿರುವಣ್ಣಾಮಲೆಯಲ್ಲಿಲ್ಲವೆಂದರೆ ತಪ್ಪಾಗದು.

ಇನ್ನೊಂದು ಬಾರಿ ಮಹಮ್ಮದೀಯ ಹುಡುಗರ ತಂಡವೊಂದು ಚಿಕ್ಕ ಸ್ವಾಮಿಗಳ ಮೇಲೆ ಕಲ್ಲೆಸೆಯುತ್ತಿತ್ತು. ಇದನ್ನು ಕಂಡ ವೆಂಕಟಾಚಲ ಮೊದಲಿಯಾರರು ಆ ತುಂಟ ಹುಡುಗರನ್ನು ಓಡಿಸಿದರು. ಆಗ ಶೇಷಾದ್ರಿ

ಸ್ವಾಮಿಗಳು ಮೊದಲಿಯಾರನ್ನು ಕರೆದು ಆ ಹುಡುಗರನ್ನು ದಂಡಿಸದೆ ಕ್ಷಮಿಸ ಬೇಕೆಂದು ತಿಳಿಸಿದರು ಮತ್ತು ಚಿಕ್ಕಸ್ವಾಮಿಗಳನ್ನು ನೋಡಿಕೊಳ್ಳುವಂತೆ ಸೂಚಿಸಿದರು.

ಮೊದಲಿಯಾರರು ಪಾತಾಳ ಲಿಂಗದ ಕಡೆಗೆ ಬಗ್ಗಿ ನೋಡಿದರು. ಬರಿಕತ್ತಲೆ ಅವರನ್ನು ಸ್ವಾಗತಿಸಿತು. ಸ್ವಲ್ಪ ಹೊತ್ತಿನಲ್ಲಿಯೇ ತೇಜಃಪುಂಜವಾದ ತರುಣಮುಖವೊಂದು ಕಂಡು ಬಂದಿತು. ಮೊದಲಿಯಾರರು ಭಯಭ್ರಾಂತರಾಗಿ ಹಿಂದಿರುಗಿ ಪಕ್ಕದ ಹೂದೋಟದಲ್ಲಿ ಕೆಲಸಮಾಡುತ್ತಿದ್ದ ಸಾಧುಗಳಿಗೆ ವಿಷಯ ತಿಳಿಸಿ ಅವರುಗಳೊಂದಿಗೆ ಪಾತಾಳ ಲಿಂಗಕ್ಕೆ ಹಿಂದಿರುಗಿದರು. ಅವರ ಮುಖ್ಯ ಉದ್ದೇಶ ಚಿಕ್ಕಸ್ವಾಮಿಗಳ ಸ್ಥಳ ಬದಲಾಯಿಸಬೇಕೆಂಬುದೇ ಆಗಿತ್ತು. ಇಷ್ಟೆಲ್ಲ ಸಾಗುತ್ತಿದ್ದರೂ ಚಿಕ್ಕಸ್ವಾಮಿಗಳು ಸಮಾಧಿಸ್ಥಿತಿಯಿಂದ ಬಹಿರ್ಮುಖ ರಾಗಲಿಲ್ಲ. ಅವರನ್ನು ಹಾಗೆಯೇ ಜಾಗರೂಕತೆಯಿಂದ ಎತ್ತಿಕೊಂಡು ಬಂದು ಸುಬ್ರಹ್ಮಣ್ಯ ದೇವಾಲಯದ ಎದುರು ಕೂರಿಸಿದರು. ವ್ರಣಗಳಿಂದ ಕೀವು, ರಕ್ತ ಒಂದೇ ಸಮನೆ ಸುರಿಯುತ್ತಲೇ ಇತ್ತು. ಇದನ್ನು ಕಂಡ ಮೊದಲಿಯಾರರೂ ಸಾಧುಗಳೂ ಆಶ್ಚರ್ಯ ಚಕಿತರಾದರು.

ಶ್ರೀ ಸುಬ್ರಹ್ಮಣ್ಯ ಸ್ವಾಮಿಯ ದೇವಸ್ಥಾನವೇ ಈಗ ಚಿಕ್ಕಸ್ವಾಮಿಗಳ ನೆಲೆಯಾಯಿತು. ಅಲ್ಲಿಯೇ ವಾಸವಾಗಿದ್ದ ಮೌನಸ್ವಾಮಿಗಳೇ ಚಿಕ್ಕಸ್ವಾಮಿ ಗಳ ಮೇಲ್ವಿಚಾರಕರಾದರು. ಪಕ್ಕದ ಹೂದೋಟದಲ್ಲಿದ್ದ ಪಳನಿಸ್ವಾಮಿ ಯೆಂಬವರು ಚಿಕ್ಕಸ್ವಾಮಿಗಳ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದರು. ಯಾರು ಲೋಕದ ಮಾನವರೆಲ್ಲರೂ ತನ್ನವರು ಎಂದು ಭಾವಿಸುವರೋ ಅಂಥ ಸಾಧುಗಳು ಲೋಕದ ಪ್ರೀತಿಗೆ ಪಾತ್ರರಾಗುವುದು ಸಹಜವೇ ಆಗಿದೆ.

ಉಮಾದೇವಿಯ ದೇವಸ್ಥಾನದಿಂದ ಅಭಿಷೇಕವಾಗಿ ಬಂದ ಹಾಲನ್ನು ಮೌನಸ್ವಾಮಿಗಳು ಚಿಕ್ಕಸ್ವಾಮಿಗಳಿಗೆ ತಂದು ಕೊಡುತ್ತಿದ್ದರು. ಇದರಲ್ಲಿ ಹಾಲು, ನೀರು, ಅರಿಶಿನದ ಪುಡಿ, ಸಕ್ಕರೆ, ಬಾಳೆಹಣ್ಣು ಇತ್ಯಾದಿ ಅನೇಕ ಅಭಿಷೇಕದ ಪದಾರ್ಥಗಳು ಸೇರಿದ ವಿಚಿತ್ರ ರಸಾಯನವಾಗಿರುತ್ತಿತ್ತು. ಆದರೆ, ಚಿಕ್ಕಸ್ವಾಮಿಗಳು ಇದಾವುದರ ಗಮನವಿಲ್ಲದೆ ಸ್ವೀಕರಿಸುತ್ತಿದ್ದರು. ಇದನ್ನು

ಕಂಡು ಮರುಗಿದ ದೇವಸ್ಥಾನದ ಪೂಜಾರಿಗಳು ಅಭಿಷೇಕವಾದೊಡನೆಯೇ ತೆಗೆದಿಟ್ಟ ಶುದ್ಧವಾದ ಹಾಲನ್ನು ಚಿಕ್ಕಸ್ವಾಮಿಗಳಿಗೆ ಕೊಡಲೆಂದು ಮೌನ ಸ್ವಾಮಿಗಳ ಬಳಿಗೆ ಕಳುಹಿಸಲು ಏರ್ಪಾಡು ಮಾಡಿದರು. ಹೀಗೆಯೇ ಕೆಲವು ದಿನಗಳು ಉರುಳಿದವು.

ಚಿಕ್ಕಸ್ವಾಮಿಗಳು ತಮ್ಮ ತಪಸ್ಸಿನ ಸ್ಥಳವನ್ನು ಪಕ್ಕದ ಹೂದೋಟಕ್ಕೂ, ಅಲ್ಲಿಂದ ವಾಹನ ಮಂಟಪಕ್ಕೂ, ಮತ್ತೆ ಅಲ್ಲಿಂದ ಶಿವಗಂಗಾ ತೀರ್ಥದ ಬಳಿಯ ಬಿಲ್ವವೃಕ್ಷದ ಅಡಿಗೂ, ಕೊನೆಯದಾಗಿ ೧೮೯೭ರ ಕೃತ್ತಿಕೋತ್ಸವದ ಸಮಯಕ್ಕೆ ಮಂಗೈ ಪಿಳ್ಳೆಯಾರ್ ದೇವಸ್ಥಾನದ ಪಕ್ಕದಲ್ಲಿಯೇ ಇದ್ದ ಹಿಪ್ಪೆಯ ಮರದ ಕೆಳಕ್ಕೆ ಬದಲಾಯಿಸಿದರು.

ಈ ಸಮಯದಲ್ಲಿ ನಡೆದ ಕೃತ್ತಿಕೋತ್ಸವ ಸ್ವಾಮಿಗಳಿಗೆ ಅಭೂತಪೂರ್ವವಾದ ಜನಪ್ರಿಯತೆಯನ್ನು ತಂದಿತು. ಅವರ ದರ್ಶನಲಾಭಕ್ಕಾಗಿ ಸಹಸ್ರಾರು ಜನ ಕಿಕ್ಕಿರಿಯಲಾರಂಭಿಸಿದರು. ಈ ಸಮಯದಲ್ಲಿಯೇ ಸ್ವಾಮಿಗಳ ಪ್ರಥಮ ಶಿಷ್ಯನಾಗಿ ಪರಿಗಣಿಸಲ್ಪಟ್ಟಿರುವ ಉದ್ದಂಡಿ ನಾಯನಾರ್ ಬಂದು ಸ್ವಾಮಿಗಳ ಸೇವೆಗೆ ನಿಂತನು.

ಚಿಕ್ಕ ಸ್ವಾಮಿಗಳ ತಪಶ್ಚರ್ಯೆ ಕೊಂಚಕಾಲ ನಿರ್ವಿಘ್ನವಾಗಿ ಸಾಗಿತು. ಅವರು ವೈರಾಗ್ಯನಿಧಿಗಳಾದಂತೆ ಅವರ ತಪಸ್ಸೂ ತೀವ್ರವಾಗುತ್ತ ಬಂದಿತು. ಗೋಡೆಗೆ ಒರಗಿ ಕ್ರಿಮಿ-ಕೀಟಗಳ ಭಾದೆಯನ್ನರಿಯದೆ ವಾರಗಳ ಗಟ್ಟಲೆ ಸಮಾಧಿಯಲ್ಲಿರುವುದು ಅವರಿಗೆ ಸಾಮಾನ್ಯವಾಗಿತ್ತು. ಇದನ್ನು ಕಂಡ ಸ್ವಾಮಿಗಳ ಶಿಷ್ಯರು ಕ್ರಿಮಿ-ಕೀಟಗಳ ಬಾಧೆಯನ್ನು ತಪ್ಪಿಸಲು ಅವರನ್ನು ಸ್ಟೂಲಿನ ಮೇಲೆ ಕುಳ್ಳಿರಿಸುತ್ತಿದ್ದರು. ಆದರೂ ಸಹ ಸ್ವಾಮಿಗಳು ಗೋಡೆಗೆ ಬೆನ್ನು ಹಚ್ಚುತ್ತಿದ್ದುದರಿಂದ ಇರುವೆಗಳು ಅವರ ಬೆನ್ನಿನಲ್ಲಿ ಎಂದೂ ಮರೆಯಾಗದ ಗುರುತುಗಳನ್ನು ಮಾಡಿದ್ದವು.

ಉದ್ದಂಡಿ ನಾಯನಾರ್ ಸ್ವಾಮಿ ಶಿಷ್ಯನಾದಂದಿನಿಂದ* ಸ್ವಾಮಿಗಳಿಗೆ ಆಗುತ್ತಿದ್ದ ತೊಂದರೆಗಳು ತಪ್ಪಿದುವು. ಆದರೆ ನಾಯನಾರ್ ಇಲ್ಲದ ವೇಳೆಯಲ್ಲಿ ತುಂಟರು ತಮ್ಮ ದಾಹವನ್ನು ತೀರಿಸಿಕೊಳ್ಳದೆ ಬಿಡುತ್ತಿರಲಿಲ್ಲ. ಅವರ ಕುಚೇಷ್ಟೆಗೆ ಸ್ವಾಮಿಗಳ ಈಗಿನ ತಪಸ್ಸಿನ ಸ್ಥಳ ಅನುಕೂಲವಾಗಿದ್ದಿತು. ಈ ಸ್ಥಳವು ಸ್ವಾಮಿಗಳಿಗೆ ಸರಿ ಬರಲಿಲ್ಲ. ಇದೇ ಸಮಯದಲ್ಲಿ ಅಣ್ಣಾಮಲೆಯ ತಂಬಿರಾನನೆಂಬ ಭಕ್ತನೊಬ್ಬನು ಸ್ವಾಮಿಗಳ ದರ್ಶನಕ್ಕೆ ಪ್ರತಿನಿತ್ಯವೂ ಬರುತ್ತಿದ್ದನು. ಇವನು ಚಿಕ್ಕಸ್ವಾಮಿಗಳಿಗೆ ಮೊರೆಹೋಗಿ ಅವರನ್ನು ತನ್ನ ಸ್ಥಳವಾದ ತಿರುವಣ್ಣಾಮಲೆಯ ಸರಹದ್ದಿನಲ್ಲಿಯೇ ಇದ್ದ ಗುರುಮೂರ್ತಂ ಎಂಬ ಪ್ರಶಾಂತ ಪ್ರದೇಶಕ್ಕೆ ಬರಬೇಕೆಂದು ಬೇಡಿಕೊಂಡನು. ಕೆಲವು ಕಾಲಾನಂತರದಲ್ಲಿ ಚಿಕ್ಕಸ್ವಾಮಿಗಳು ಅವನ ಬೇಡಿಕೆಗೆ ಮನ್ನಣೆಯಿತ್ತು ಗುರುಮೂರ್ತಂಗೆ ತೆರಳಿದರು. ಅಲ್ಲಿ ಅವರ ವರ್ಚಸ್ಸು ದಿನೇ ದಿನೇ ಬೆಳೆಯುತ್ತಾ ಬಂತು. ಜೊತೆಗೆ ಆತ್ಮನಿಗ್ರಹವೂ ಪುಷ್ಟಿಹೊಂದಿತು. ಆಗ ಚಿಕ್ಕಸ್ವಾಮಿಗಳು ನಡುಹಗಲ ಸೂರ್ಯನಂತೆ ಹೊಳೆಯ ತೊಡಗಿದರು.

ಚಿಕ್ಕಸ್ವಾಮಿಗಳ ಕೀರ್ತಿಲತೆ ಈಗ ವಿಶಾಲವಾಗಿ ಹಬ್ಬಿ ನಿಂತಿತ್ತು. ಅವರ ಸಂದರ್ಶನಕ್ಕಾಗಿ ಬರುವ ಜನತೆಗೆ ಲೆಕ್ಕವೇ ಇಲ್ಲ. ಆ ಜನಪ್ರವಾಹವನ್ನು ತಡೆಯಲು ಪ್ರತ್ಯೇಕ ಸಿಬ್ಬಂದಿಯನ್ನು ಏರ್ಪಡಿಸಬೇಕಾಗಿತ್ತೋ ಏನೋ! ಸ್ವಾಮಿಗಳ ಪಾದಪೂಜೆ ಅಖಂಡವಾಗಿ ಸಾಗಲಾರಂಭಿಸಿತು. ಮಕ್ಕಳಿಲ್ಲದವರು, ಆರೋಗ್ಯ ಭಾಗ್ಯ ಬೇಕಾದವರು, ಆತ್ಮ ಸಿದ್ಧಿ ಬಯಸುವವರು ಅಂತೂ ಒಂದಲ್ಲೊಂದು ಕಾರಣದಿಂದ ಭಕ್ತರು ಸ್ವಾಮಿಗಳ ದರ್ಶನ ಆಶೀರ್ವಾದಗಳಿಗಾಗಿ ಹಾತೊರೆಯುತ್ತಿದ್ದರು. ಸ್ವಾಮಿಗಳ ಸಾನ್ನಿಧ್ಯ ನಿತ್ಯ ಜಾತ್ರೆಯಾಗುತ್ತ ಬಂದಿತು. ಜನಗಳ ಹುಯಿಲಿನಿಂದ ಸ್ವಾಮಿಗಳನ್ನು ಪಾರುಮಾಡಲು ಅವರ ಸುತ್ತ ಬೊಂಬಿನ ಕಟಕಟೆಯನ್ನು ಕಟ್ಟುವ ಸಂದರ್ಭ

* ಭಗವಾನ್ ರಮಣ ಮಹರ್ಷಿಗಳು ಎಂದೂ ಯಾರಿಗೂ ದೀಕ್ಷೆಯನ್ನು ಕೊಟ್ಟಿಲ್ಲ. ಗುರುಪೀಠವನ್ನು ಏರಿಲ್ಲ. ಅವರಿಗೆ ಅರುಣಾಚಲೇಶ್ವರನ ಹೊರತು ಬೇರಾರೂ ಇರಲಿಲ್ಲ. ಇಲ್ಲಿ ಶಿಷ್ಯನೆಂದರೆ ದೀಕ್ಷಾಬದ್ಧ ಶಿಷ್ಯನೆಂದಲ್ಲ.

ಪ್ರಾಪ್ತವಾಯಿತು. ಈ ಮಧ್ಯೆ ನೆಚ್ಚಿನ ಶಿಷ್ಯರಾದ ತಂಬಿರಾನ್ ಮತ್ತು ನಾಯನಾರ್ ತಮ್ಮ ತಮ್ಮ ಮಠಗಳಿಗೆ ಕಾರಣಾಂತರಗಳಿಂದ ಹಿಂದಿರುಗಿದ್ದರು. ಈಗ ಸ್ವಾಮಿಗಳ ಯೋಗಕ್ಷೇಮವನ್ನು ನೋಡಿಕೊಳ್ಳುವವರು ಯಾರೂ ಇಲ್ಲವಾಗಿದ್ದರೂ ಅವರ ಅನ್ನ ಪಾನಾದಿಗಳು ಸುಸೂತ್ರವಾಗಿ ಭಕ್ತರಿಂದ ನಡೆದು ಹೋಗುತ್ತಿದ್ದುವು.

ಇದೇ ಊರಿನಲ್ಲಿದ್ದ ವಿಘ್ನೇಶ್ವರ ಸುಂದರ ದೇವಾಲಯದ ಅರ್ಚಕನಾದ ಪಳನಿಸ್ವಾಮಿಯೆಂಬುವನು ಸ್ವಾಮಿಗಳ ಶಿಷ್ಯವೃತ್ತಿಯನ್ನು ಕೈಗೊಂಡು ಆಜೀವಪರ್ಯಂತ ಅವರ ಸೇವೆಯಲ್ಲಿಯೇ ತನ್ನ ಬಾಳು ಕಳೆಯಲು ನಿರ್ಧರಿಸಿದನು.

ಭಕ್ತವೃಂದದವರು ಚಿಕ್ಕಸ್ವಾಮಿಗಳವರ ಬಗ್ಗೆ ತಳೆದ ಗೌರವ ವಿಶ್ವಾಸಗಳು ವರ್ಣನಾತೀತವಾದವು. ದೇವಾಲಯಗಳಲ್ಲಿನ ವಿಗ್ರಹಗಳನ್ನು ಪೂಜಿಸುವಂತೆಯೇ ಶ್ರೀ ಸ್ವಾಮಿಗಳನ್ನು ಗಂಧ, ಪುಷ್ಪ, ಅಭಿಷೇಕಗಳಿಂದ ಪೂಜೆಗೈಯ್ಯಬೇಕೆಂದು ಭಕ್ತರು ಬಯಸಲಾರಂಭಿಸಿದರು. ಆದರೆ ಸ್ವಾಮಿಗಳಿಗೆ ಇದು ಸಹಿಸದಾಯಿತು. ಒಂದು ದಿನ ಈ ಬಗೆಯ ಭಕ್ತಿಗೆ ತಮ್ಮ ಅಸಮ್ಮತಿಯನ್ನು ಸೂಚಿಸಲು ಚಿಕ್ಕಸ್ವಾಮಿಗಳು ಗೋಡೆಯ ಮೇಲೆ "ಇದೊಂದೇ ಈ ದೇಹದ ಸೇವೆಗೆ ಸಾಕು" ಎಂದು ತಮಿಳಿನಲ್ಲಿ ಬರೆದು ತಂಬಿರಾನನು ಎಂದಿನಂತೆ ಭಿಕ್ಷೆತಂದು ಒಪ್ಪಿಸಿದಾಗ ಈ ರೀತಿ ತಮ್ಮ ಅಭಿಮತವನ್ನು ವ್ಯಕ್ತಪಡಿಸಿದರು. ಅವರ ಅಭಿಪ್ರಾಯದಲ್ಲಿ ಅನ್ನದ ಹೊರತು ಇನ್ನಾವುದೂ ಅಗತ್ಯವಿಲ್ಲವೆಂದೂ, ಭಕ್ತವೃಂದದ ಈ ವಿಧದ ಪೂಜೆಗೆ ತಮ್ಮ ಒಪ್ಪಿಗೆ ಇಲ್ಲವೆಂದೂ ಸೂಚಿಸಲ್ಪಟ್ಟಿತು. ಸ್ವಾಮಿಗಳ ಈ ಪ್ರಥಮ ತಮಿಳು ಬರೆಹ ತಿರುವಣ್ಣಾಮಲೆಯ ಜನರಿಗೆ ಅವರಿಗೆ ಶುದ್ಧ ತಮಿಳು ಭಾಷೆಯ ಪರಿಚಯವಿದೆಯೆಂಬುದನ್ನು ಚೆನ್ನಾಗಿ ತೋರಿಸಿಕೊಟ್ಟಿತ್ತು.

ಇದೇ ಸಂದರ್ಭದಲ್ಲಿ ಇನ್ನೂ ಒಂದು ಮಹತ್ವದ ಘಟನೆ ನಡೆಯಿತು. ಚಿಕ್ಕಸ್ವಾಮಿಗಳ ದರ್ಶನಕ್ಕೆ ತಪ್ಪದೆ ಬರುತ್ತಿದ್ದ ವೆಂಕಟರಾಮಯ್ಯನೆಂಬ ಭಕ್ತನಿಗೆ ಸ್ವಾಮಿಗಳ ಹೆಸರು, ಕುಲ, ಗೋತ್ರ ಮತ್ತು ಸ್ಥಳಗಳ ಪೂರ್ವೋತ್ತ

ರಗಳ ವಿವರವನ್ನು ತಿಳಿಯಬೇಕೆಂಬ ಆಸೆ ಬಲವಾಯಿತು. ಈ ಬಗ್ಗೆ ಅನೇಕ ಬಾರಿ ಸ್ವಾಮಿಗಳನ್ನು ಪ್ರಶ್ನಿಸಿದನು. ಆದರೆ, ಅದಕ್ಕೆ ದೊರೆತ ಉತ್ತರ ಮೌನ. ಭಕ್ತನ ಕುತೂಹಲ ಕೆರಳಿ ನಿಂತಿತು. ಸ್ವಾಮಿಗಳ ಜೀವನಾಂಶಗಳನ್ನರಿಯಲೇಬೇಕೆಂದು ಹಟವನ್ನೇ ತೊಟ್ಟನು. ಕಛೇರಿಗೆ ಹೋಗದಿದ್ದರೂ, ಮನೆಯಕಡೆಗೆ ಸುಳಿಯದಿದ್ದರೂ ಚಿಂತೆಯಿಲ್ಲ-ಸ್ವಾಮಿಗಳಿಂದ ಉತ್ತರ ಪಡೆದೇ ಪಡೆಯುತ್ತೇನೆ. ಅಲ್ಲಿಯವರೆಗೂ ಸ್ಥಳಬಿಟ್ಟು ಅಲುಗುವುದಿಲ್ಲ ಎಂದು ಹಠತೊಟ್ಟನು. ಭಕ್ತನ ಈ ಅಚಲ ನಿರ್ಧಾರಕ್ಕೆ ಸ್ವಾಮಿಗಳು ಸೋಲಬೇಕಾಯಿತು. ಅವರ ಮನಕರಗಿ ತಮ್ಮ ಪೂರ್ವಾಶ್ರಮದ ನಾಮಾಂಕಿತವನ್ನು ಜನ್ಮಸ್ಥಳವಾವುದೆಂಬುದನ್ನು ಬರೆದು ತಿಳಿಸಿದರು.

ಗುರುಮೂರ್ತಂಗೆ ಚಿಕ್ಕಸ್ವಾಮಿಗಳು ಬಂದು ಒಂದೂವರೆ ವರ್ಷ ಕಳೆಯಿತು.

ಸ್ವಾಮಿಗಳ ದಿನಚರಿ, ಸಮಾಧಿಸ್ತರಾಗಿರುವುದು; ಮಧ್ಯಾಹ್ನದಲ್ಲಿ ಸ್ವಲ್ಪ ಆಹಾರ ಸ್ವೀಕರಿಸುವುದು ಇಷ್ಟುಮಾತ್ರವಾಗಿದ್ದಿತು. ಬರಬರುತ್ತ, ದೇಹವು ಸೊರಗಿ ಎಲುಬಿನ ಹಂದರವೋ ಎಂದು ಭಾಸವಾಗತೊಡಗಿತು. ಭಕ್ತರ ಗದ್ದಲಕ್ಕಂತೂ ಮಿತಿ ಇಲ್ಲದಾಯಿತು. ಇದನ್ನು ಕಂಡು ಭಕ್ತ ಪಳನಿಸ್ವಾಮಿ ಚಿಕ್ಕಸ್ವಾಮಿಗಳನ್ನು ಗದ್ದಲದಿಂದ ಪಾರುಮಾಡಲು ತಾನಿಲ್ಲದಾಗ ಬಾಗಿಲಿಗೆ ಬೀಗಹಾಕಿಕೊಂಡು ಹೋಗುತ್ತಿದ್ದನು.

ಬಹಳಕಾಲ ಇದು ನಡೆಯಲಿಲ್ಲ. ಅದು ಅವನ ಮನಸ್ಸಿಗೆ ಹಿಡಿಸಲೂ ಇಲ್ಲ. ಸ್ವಾಮಿಗಳು ಸಮೀಪದಲ್ಲಿಯೇ ಇದ್ದ 'ಚೂತವಾಟಿಕೆ'ಯೆಂಬ ಮಾವಿನ ತೋಪಿಗೆ ತಮ್ಮ ನೆಲೆಯನ್ನು ಬದಲಾಯಿಸಿದರು. ಈ ಕ್ಷೇತ್ರ ಪ್ರದೇಶಕ್ಕೆ ಪ್ರವೇಶಿಸಲು ಪ್ರತಿಯೊಬ್ಬರೂ ಅದರ ಯಜಮಾನ ವೆಂಕಟರಾಮನಾಯಕರ ಅಪ್ಪಣೆಯನ್ನು ಪಡೆಯಬೇಕಾಗಿದ್ದಿತು. ಇದರಿಂದ ಜನಸಂದಣಿಯೂ ಗದ್ದಲ ಸಲ್ಪ ಕಡಿಮೆಯಾದಂತಾಯಿತು. ಆರು ತಿಂಗಳ ಕಾಲ ಯಾವ ಆತಂಕವೂ ಇಲ್ಲದೆ ಮುನಿಗಳ ತಪಶ್ಚರ್ಯೆ ಸಾಗಿತು.

ಈ ಸಮಯದಲ್ಲಿ ಪಳನಿಸ್ವಾಮಿ ತನಗೆ ಬಿಡುವು ದೊರೆತಾಗಲೆಲ್ಲ ಆ ಊರಿನ ಗ್ರಂಥ ಭಂಡಾರಕ್ಕೆ ಹೋಗಿ ವೇದಾಂತ ಚೂಡಾಮಣಿ, ಕೈವಲ್ಯ ನವನೀತ ಮುಂತಾದ ವೇದಾಂತ ಗ್ರಂಥಗಳನ್ನು ತಂದು ಪಠಿಸಿ ಬಂದ ಸಂದೇಹಗಳ ಪರಂಪರೆಯನ್ನು ಸಿದ್ಧ ಪುರುಷರಾದ ಚಿಕ್ಕಸ್ವಾಮಿಗಳಿಂದ ಪರಿಹರಿಸಿ ಕೊಳ್ಳುತ್ತಿದ್ದನು.

ಕೆಲವು ದಿವಸಗಳ ನಂತರ ಚಿಕ್ಕಸ್ವಾಮಿಗಳು ಪವಲಕ್ಕುನ್ರುವಿನಲ್ಲಿದ್ದು ಅರುಣಾಚಲದ ಗಿರಿಯಮೇಲಕ್ಕೆ ಹೋದರು. ಅಲ್ಲಿಯ ವಾತಾವರಣವು ಅವರಿಗೆ ಸರಿಹೊಂದದೆ ಗವಿಯಿಂದ ಗವಿಗೆ ಅಲೆದಾಡಿದರು. ಜಗತ್ತೇ ಮನೆಯಾಗಿರುವವರಿಗೆ ಯಾವ ಸ್ಥಳವಾದರೇನು.? ವಿರೂಪಾಕ್ಷ ಗುಹೆ ಕೆಲವುಕಾಲ ಸ್ವಾಮಿಗಳ ಧ್ಯಾನದ ಸ್ಥಳವಾಗಿತ್ತು. ಇಲ್ಲಿಯೂ ಭಕ್ತರ ತಂಡಕ್ಕೆ ಕೊರತೆ ಇರಲಿಲ್ಲ. ಇಲ್ಲಿಂದ ಸ್ವಾಮಿಗಳು ಸದ್ಗುರು ಸ್ವಾಮಿಯ ಗುಹೆಗೆ ತೆರಳಿ ಅಲ್ಲಿ ಕೆಲವು ಕಾಲ ವಾಸವಾಗಿದ್ದರು. ಅಲ್ಲಿಂದ ಸ್ವಾಮಿಗಳು ಮತ್ತೆ ಶ್ರೀ ರಂಗಾಚಾರ್-ರಾಮಾನುಜಾಚಾರ್ ಎಂಬ ಸಹೋದರರ ಕೋರಿಕೆಯ ಮೇಲೆ ಮುಳೈಪಾಲ್ ತೀರ್ಥದ ಬಳಿ ಅದೇ ತಾನೇ ವಾಸಯೋಗ್ಯವಾಗಿ ಮಾಡಿದ್ದ ಗವಿಗೆ ತಮ್ಮ ನೆಲೆಯನ್ನು ಪಳನಿಸ್ವಾಮಿ ಮೊದಲಾದ ಶಿಷ್ಯರೊಂದಿಗೆ ಬದಲಾಯಿಸಿದರು. ಬೃಹದಾಕಾರವಾಗಿ ಬೆಳೆದು ನಿಂತಿದ್ದ ಶಿಷ್ಯವೃಂದಕ್ಕೆ ಆಹಾರ ಪಾನೀಯಗಳನ್ನು ಒದಗಿಸುವುದು ಒಂದು ಸಮಸ್ಯೆಯಾಗ ತೊಡಗಿತು. ಭಕ್ತಾದಿಗಳ ಕಾಣಿಕೆ ಅನಿಶ್ಚಿತವಾಗಿ ತೋರಿದ್ದರಿಂದ ಪಳನಿಸ್ವಾಮಿ ಮೊದಲಾದವರು ಊರಿನೊಳಕ್ಕೆ ಹೋಗಿ ಭಿಕ್ಷೆಯೆತ್ತಲಾರಂಭಿಸಿದರು. ಭಿಕ್ಷೆಯೆತ್ತಲು ಹೋಗುತ್ತಿದ್ದವರ ನೆರವಿಗಾಗಿ'ಅಕ್ಷರಮಣಮಾಲಾ'ಎಂಬ ತತ್ವಗರ್ಭಿತವಾದ ಕೀರ್ತನೆಯನ್ನು ಚಿಕ್ಕಸ್ವಾಮಿಗಳು ರಚಿಸಿಕೊಟ್ಟರು.

ಸ್ವಾಮಿಗಳ ಜೀವನ ಎಂದಿನಂತೆ ಸಾಗಿತ್ತು. ಅಂಥ ಮಹತ್ತರ ಬದಲಾವಣೆಗಳ್ಯಾವುವೂ ಕಂಡು ಬಂದಿರಲಿಲ್ಲ. ಇದೇ ಸಂದರ್ಭದಲ್ಲಿ ಆಶ್ರಮಕ್ಕೆ ಬಂದಿದ್ದ ಚಿದಂಬರ ಶಾಸ್ತ್ರಿಗಳೆಂಬ ಭಕ್ತರೊಬ್ಬರು ಶಂಕರಾಚಾರ್ಯ ವಿರಚಿತ 'ವಿವೇಕ ಚೂಡಾಮಣಿ' ಎಂಬ ಗ್ರಂಥವನ್ನು ಬಿಟ್ಟು ತೆರಳಿದರು. ಕೆಲವು

ಕಾಲದ ನಂತರ ಭಕ್ತರ ಕೋರಿಕೆಯಂತೆ ಸ್ವಾಮಿಗಳು ಇದನ್ನು ಸುಲಭವಾದ ತಮಿಳಿನಲ್ಲಿ ಗದ್ಯ ರೂಪದಲ್ಲಿ ಭಾಷಾಂತರಿಸಿದರು. ಈ ಸಮಯಕ್ಕೆ ಸರಿಯಾಗಿ ಹಿಂತಿರುಗಿದ್ದ ಪ್ರಥಮ ಶಿಷ್ಯ ಉದ್ದಂಡಿ ನಾಯನಾರ್ ಇತ್ತ ೧೦೦ ರೂಪಾಯಿ ಗುರುದಕ್ಷಿಣೆಯು ಕಾಲಕ್ರಮದಲ್ಲಿ ಇದರ ಮುದ್ರಣ ಕಾರ್ಯಕ್ಕೆ ಉಪಯೋಗಿಸಲ್ಪಟ್ಟಿತು.

ಹೀಗೆ ಸುಮಾರು ೧೨ ವರ್ಷಗಳಕಾಲ ಚಿಕ್ಕಸ್ವಾಮಿಗಳ ತಪಸ್ಸು ಅವಿರತವಾಗಿ, ಸಾಗಿತು. ಅವರ ತಪೋಜೀವನ ಒಂದು ಪರಿಪೂರ್ಣ ಘಟ್ಟವನ್ನು ಸಮೀಪಿಸುತ್ತಿತ್ತು. ಅವರ ಕೀರ್ತಿ ದಿಗಂತ ವಿಶ್ರಾಂತವಾಯಿತು. ದೇಶವಿದೇಶಗಳಿಂದ ಬರುವವರ ಸಂಖ್ಯೆ ಮಿತಿಮೀರಿತು.

ಹೆಚ್ಚೇನು, ಚಿಕ್ಕಸ್ವಾಮಿಗಳು ಆಧ್ಯಾತ್ಮ ಜಗತ್ತಿನ ಭಕ್ತವೃಂದದ ಆರಾಧ್ಯ ಮೂರ್ತಿಯಾದರು. ಘಮಘಮಿಸುವ ಪುಷ್ಪಗಳಿಗೆ ದುಂಬಿಗಳು ಮುತ್ತುವುದೂ, ಪೂರ್ಣಚಂದ್ರನ ಉದಯಕ್ಕೆ ಚಕೋರಗಳು ನಲಿದಾಡುವುದೂ, ಸುಮಧುರ ಸಂಗೀತಕ್ಕೆ ರಸಿಕ ಜನರು ತಲೆದೂಗುವುದೂ ಹೇಗೆ ಸ್ವಭಾವವೋ ಹಾಗೆಯೇ ಕಾಮ, ಕ್ರೋಧ, ಲೋಭ, ಮೋಹಗಳನ್ನು ಜಯಿಸಿದ ಸಿದ್ಧ ಪುರುಷನ ದರ್ಶನಕ್ಕೆ, ಶುದ್ಧ ಮನಸ್ಸಿನ ಭಕ್ತಕೋಟಿ ಬಂದೆರಗುವುದು ಸ್ವಾಭಾವಿಕವಲ್ಲವೇ ?



## ೮

## ಸತ್ವ ಪರೀಕ್ಷೆ

ಸುಮಾರು ೮ ವರ್ಷಗಳ ಹಿಂದಿನ ಮಾತು. ೧೮೯೬ನೆಯ ಇಸವಿಯ ಆಗಸ್ಟ್ ೨೯ನೆಯ ಶನಿವಾರ, ಸಂಧ್ಯಾಕಾಲ ಸಮೀಪಿಸುತ್ತ ಬಂದಿತ್ತು. ವೆಂಕಟರಮಣ ಮನೆಬಿಟ್ಟು ತೆರಳಿ ಆಗಲೇ ನಾಲ್ಕೈದು ಗಂಟೆಗಳಾಗಿತ್ತು ಅವನು ಬರೆದಿಟ್ಟಿದ್ದ ಕಾಗದವನ್ನು ಅವನ ಅಣ್ಣ ನಾಗಸ್ವಾಮಿ ತನ್ನ ಪುಸ್ತಕ ವನ್ನು ತೆರೆದಾಗ ನೋಡಿದನು. ಓದಿಕೊಂಡನು. ತನ್ನ ಕಣ್ಣನ್ನೇ ತಾನು ನಂಬದಾದನು. ಕಂಠ ಗದ್ಗದಿತವಾಯಿತು. ಕಣ್ಣುಗಳು ಒದ್ದೆಯಾದವು. ಈ ವಾರ್ತೆಯನ್ನು ತಾಯಿಗೆ ಹೇಗೆ ತಿಳಿಸಬೇಕೋ ಎಂಬುದು ಹೊಳೆಯಲೇಇಲ್ಲ.

ಕ್ಷಣಮಾತ್ರದಲ್ಲಿ ವೆಂಕಟರಮಣ ಮನೆಬಿಟ್ಟ ಸುದ್ದಿ ಕಾಡ್ಗಿಚ್ಚಿನಂತೆ ಹಬ್ಬಿತು. ಅವನ ತಾಯಿಗೆ ಈ ದಾರುಣವಾದ ವಾರ್ತೆ ತಿಳಿದಾಗಲಂತೂ ಅವರು ಇದ್ದಕ್ಕಿದ್ದಂತೆಯೇ ಮೂರ್ಛೆ ಹೋದರು. ಅಲಗಮ್ಮಾಳ್‌ರವರಿಗೆ ಯಾವರೀತಿ ಸಮಾಧಾನ ಹೇಳಬೇಕೋ ಎಂಬುದು ಗೋಚರವಾಗದಾಯಿತು. ತಾಯಿಯ ದುಃಖ ಸಹನಾತೀತವಾಯಿತು.

ಅಲಗಮ್ಮಾಳ್‌ರವರನ್ನು ಸಮಾಧಾನ ಪಡಿಸುವುದೇ ಒಂದು ದೊಡ್ಡ ಕೆಲಸವಾಯಿತು. ವೆಂಕಟರಮಣ ಕೇವಲ ಅಲ್ಪಹಣ ಒಯ್ದಿರುವನೆಂದೂ, ಅದು ತೀರಿದೊಡನೆಯೇ ಮನೆಗೆ ಬರಲೇಬೇಕಾಗುವುದೆಂದೂ ನುಡಿದರು. ಅಲಗಮ್ಮಾಳ್‌ರವರಿಗೆ ಸಮಾಧಾನವಾಗದೇ ಹೋದರೂ ಉಳಿದವರಿಗೆ ವೆಂಕಟ ರಮಣ ಕೆಲವು ದಿನದಲ್ಲಿಯೇ ಹಿಂದಿರುಗುವನೆಂಬ ಭರವಸೆ ಇದ್ದಿತು.

ದಿನಗಳು ಉರುಳಿದವು. ವಾರಗಳು ಕಳೆದವು. ತಿಂಗಳುಗಳು ತಿರುಗಿದ ವು. ಆದರೆ, ವೆಂಕಟರಮಣನ ಸುಳಿವೇ ಹತ್ತಲಿಲ್ಲ. ತಾಯಿಯ ಕೊರಗು ಹೆಚ್ಚಾಯಿತು. ವೆಂಕಟರಮಣನನ್ನು ಕಾಣಬೇಕೆಂಬ ಕುತೂಹಲ ಕ್ಷಣ ಕ್ಷಣಕ್ಕೂ ಹೆಚ್ಚುತ್ತಲಿತ್ತು. ಅವರು ತಮ್ಮ ಭಾವಪ್ಪೈದುನರಾದ ನೆಲ್ಲಿಯಪ್ಪ ಯ್ಯರ್ ಮತ್ತು ಸುಬ್ಬಯ್ಯರ್‌ರನ್ನು ವೆಂಕಟರಮಣನ ಶೋಧನೆಯನ್ನು

ತ್ವರಿತಗೊಳಿಸಬೇಕೆಂದು ಪೀಡಿಸಿದರು. ಅತ್ತಿಗೆಯ ಮಾತಿಗೆ ಗೌರವವಿತ್ತು ಇವರಿಬ್ಬರೂ ವೆಂಕಟರಮಣನನ್ನು ಹುಡುಕಲು ಸತತವಾಗಿ ಪ್ರಯತ್ನಿಸಲಾರಂಭಿಸಿದರು. ವೆಂಕಟರಮಣನ ಬಗ್ಗೆ ಯಾವುದೇ ಸಣ್ಣಪುಟ್ಟ ವರ್ತಮಾನ ಬಂದರೂ ಅವರಲ್ಲಿ ಆಶಾಜ್ಯೋತಿಯನ್ನು ಹೊತ್ತಿಸುತ್ತಿತ್ತು.

ಈ ಸಮಯದಲ್ಲಿ ಗುರುತಿನವರೊಬ್ಬರು ವೆಂಕಟರಮಣ ತಿರುವನಂತಪುರದ ನಾಟಕ ಕಂಪನಿ ಸೇರಿರುವುದಾಗಿಯೂ, ತಾವು ಪ್ರತ್ಯಕ್ಷವಾಗಿ ನೋಡಿದುದಾಗಿಯೂ ತಿಳಿಸಿದರು. ಸರಿ ನೆಲ್ಲಿಯಪ್ಪರ್ ತಿರುವನಂತಪುರಕ್ಕೆ ತೆರಳಿ ವೆಂಕಟರಮಣನ ಶೋಧ ನಡೆಯಿಸಿದರು. ಆದರೆ, ಇಲ್ಲದ ಸ್ಥಳದಲ್ಲಿ ಹುಡುಕಿದರೆ ಎಲ್ಲಿ ಸಿಕ್ಕಬೇಕು? ಅವರು ಯಾವ ಸುದ್ದಿಯನ್ನು ದೊರಕಿಸದೆ ಹಾಗೆಯೇ ಹಿಂತಿರುಗಿದರು. ಅಲಗಮ್ಮಾಳ್‌ರವರಿಗೆ ತಮ್ಮ ಭಾವನ್ಮೈದುನನು ನಡೆಸಿದ ಶೋಧನೆಯ ಬಗ್ಗೆ ಅನುಮಾನ ಪ್ರಾಪ್ತವಾಗಿ ತಾವೇ ತಿರುವನಂತಪುರಕ್ಕೆ ಹೊರಟರು. ಅಲ್ಲಿಯ ಬೀದಿಯೊಂದರಲ್ಲಿ ವೆಂಕಟರಮಣನಷ್ಟೇ ಎತ್ತರ, ಮುಖಭಾವವುಳ್ಳ, ಬಾಲಕನೊಬ್ಬನನ್ನು ನೋಡಿದರೇ ಹೊರತು ಅವನ ಸುಳಿವು ಇವರಿಗೂ ಹತ್ತಲಿಲ್ಲ. ನಿರಾಶೆಯಿಂದ ಅಲಗಮ್ಮಾಳ್ ತಿರುಚ್ಚುಳಿಯ ದಾರಿಹಿಡಿದರು.

ವರ್ಷಗಳು ಕಳೆದವು. ವೆಂಕಟರಮಣನ ಅಗಲಿಕೆಯ ವೇದನೆ ಮನೆಯವರಿಗೆಲ್ಲ ಇದ್ದುದರಲ್ಲಿಯೇ ಕಡಿಮೆಯಾಗುತ್ತ ಬಂತು. ಅಣ್ಣ ನಾಗಸ್ವಾಮಿ ವಿದ್ಯಾಭ್ಯಾಸ ಮುಗಿಸಿ ರಿಜಿಸ್ಟ್ರೇರ್ಷ ಕಛೇರಿಯಲ್ಲಿ ಗುಮಾಸ್ತನಾದನು ಅವನ ವಿವಾಹವೂ ಆಯಿತು. ತಮ್ಮ ನಾಗಸುಂದರ ಪ್ರಗತಿಯ ಮುಖವನ್ನೈದುತ್ತಲಿದ್ದನು.

ತಿರುಚ್ಚುಳಿಯ ಯುವಕನೊಬ್ಬನು ಮಧುರೆಯ ತಿರುಜ್ಞಾನಿ ಸಂಬಂಧಿಗಳ ಮಠಕ್ಕೆ ಕಾರ್ಯಗೌರವದಿಂದ ತೆರಳಿದ್ದಾಗ ಅಲ್ಲಿಗೆ ಬಂದಿದ್ದ ಅಣ್ಣಾಮಲೆಯ ತಂಬಿರಾನನೆಂಬುವನಿಂದ ಅತ್ಯಂತ ಕುತೂಹಲಕಾರಿಯಾದ, ತಿರುವಣ್ಣಾಮಲೆಯಲ್ಲಿ ಚಿಕ್ಕಸ್ವಾಮಿಯೆಂದು ಜನಪ್ರಿಯನಾದ, ತಿರುಚ್ಚುಳಿಯ ತರುಣನೊಬ್ಬನ ವಾರ್ತೆಯನ್ನು ಕೇಳಿದನು ಇದು ಅವನ ಕುತೂಹಲವನ್ನು

ಇನ್ನೂ ಕೆರಳಿಸಿತು. ತಂಬಿರಾನನಿಂದ ಇನ್ನೂ ಹೆಚ್ಚಿನ ಸಂಗತಿ ಕೇಳಿ ತಿಳಿದ ಮೇಲೆ ತಿರುವಣ್ಣಾಮಲೆಯ ಸಂನ್ಯಾಸಿ, ತಿರುಚ್ಚುಳಿಯ ವೆಂಕಟರಮಣನಲ್ಲದೆ ಮತ್ತಾರೂ ಅಲ್ಲವೆಂದು ಖಚಿತವಾಯಿತು. ಕೂಡಲೇ ಈತನು ವೆಂಕಟರಮಣನ ಮನೆಯವರಿಗೆ ಈ ಸಮಾಚಾರವನ್ನಿತ್ತನು. ಇದನ್ನು ಕೇಳಿದೊಡನೆಯೇ ನೆಲ್ಲಿಯಪ್ಪಯ್ಯರ್ ತಮ್ಮ ಗೆಳೆಯನೊಬ್ಬನೊಡಗೂಡಿ ತಿರುವಣ್ಣಾಮಲೆಗೆ ಧಾವಿಸಿದರು. ಆಗ ಚಿಕ್ಕಸ್ವಾಮಿಗಳು ಗುರುಮೂರ್ತಂನಲ್ಲಿದ್ದ 'ಚೂತವಾಟಿಕೆ' ಎಂಬ ಮಾವಿನ ತೋಪಿನಲ್ಲಿದ್ದರು.

ಸುಬ್ಬಯ್ಯರ್ ಮತ್ತು ಅವರ ಗೆಳೆಯರು ಸ್ವಾಮಿಗಳ ಸಂದರ್ಶನಕ್ಕಾಗಿ ಬಹಳವಾಗಿ ಪ್ರಯತ್ನಿಸಿ ಕೊನೆಗೆ ಅವಕಾಶ ದೊರೆಕಿಸಿಕೊಂಡರು. ಮೌನಿಗಳಾಗಿದ್ದ ಸ್ವಾಮಿಗಳ ಮುಂದೆ ಇವರ ವಾಕ್ಚಾತುರ್ಯ ಏನೇನೂ ನಡೆಯಲಿಲ್ಲ. ಆದರೂ ಸುಬ್ಬಯ್ಯರ್‌ರವರು ನಿರಾಶರಾಗಲಿಲ್ಲ.

"ತಮ್ಮ ಸಂನ್ಯಾಸಕ್ಕೆ ಚ್ಯುತಿಬಾರದ ರೀತಿಯಲ್ಲಿ ನಡೆದುಕೊಳ್ಳುತ್ತೇನೆ. ಮಾನಾಮಧುರೆಯಲ್ಲಿ ಮಹಾತ್ಮರೊಬ್ಬರ ಸಮಾಧಿ ಇದೆ. ಅಲ್ಲಿ ಯಾವ ಅಡ್ಡಿ ಆತಂಕವೂ ಇಲ್ಲದೆ ಇದ್ದುಕೊಂಡು ತಪೋಜೀವನವನ್ನು ನಡೆಯಿಸಬಹುದು" ಎಂದು ಎಷ್ಟೆಷ್ಟೋ ಹೇಳಿದರು.

ಇದಕ್ಕೆ ದೊರೆತ ಉತ್ತರ ಮೇರುಸದೃಶವಾದ ಮೌನ.

ಸ್ವಾಮಿಗಳು ತಳೆದ ಈ ಧೋರಣೆಯಿಂದಾಗಿ ಸುಬ್ಬಯ್ಯರ್‌ರವರಿಗೆ ಅವರು ತಮ್ಮ ಬಂಧುಗಳೊಡನೆ ಇರಲು ಇಷ್ಟವಿಲ್ಲವೆಂಬುದು ಸ್ಪಷ್ಟವಾವಾಯಿತು. ಹೃದಯಭಾರದಿಂದ ಹಿಂತಿರುಗಿದರು.

ಅಲಗಮ್ಮಾಳ್‌ರವರಿಗೆ ಮತ್ತೂ ನಿರಾಶೆಯಾಯಿತು.

ಸ್ವತಃ ತಾವೇ ಹೋಗಿ ಮಗನನ್ನು ಕರೆತರಬೇಕೆಂದು, ನಿರ್ಧರಿಸಿದರು. ನಾಗಸ್ವಾಮಿಗೆ ಸಿಕ್ಕಬೇಕಾಗಿದ್ದ ಕ್ರಿಸ್‌ಮಸ್ ರಜಾಕ್ಕಾಗಿ ಕಾದು ಆಮೇಲೆ ಅವನೊಡನೆ ತಿರುವಣ್ಣಾಮಲೆಗೆ ಆಗಮಿಸಿದರು.

ಈ ಸಮಯಕ್ಕಾಗಲೇ ಸ್ವಾಮಿಗಳ ನೆಲೆ ಪವಳಕ್ಕುನ್ರು ವಾಗಿತ್ತು.

ತಾಯಿ ಬಂದರು. ಜಟಾಧಾರಿಯಾಗಿ, ಉಗುರುಗಳನ್ನು ಬೆಳೆಯಿಸಿ, ಕೌಪೀನವನ್ನು ಧರಿಸಿ, ಶಿಲಾಪ್ರಸ್ತರದ ಮೇಲೆ ಚಿರಮೌನದಲ್ಲಿ ಪ್ರಶಾಂತ ಗಂಭೀರವದನನಾಗಿ ಪುರಾಣಕಾಲದ ವಶಿಷ್ಠಋಷಿಯಂತೆ ಮಂಡಿಸಿದ್ದ ಮಮತೆಯ ಮಗನನ್ನು ಮಾತೆ ನೋಡಿದಳು. ಕಠೋರ ತಪಸ್ಸಿಗೆ ಸಿಕ್ಕ ಮಗನ ಸ್ಥಿತಿಯನ್ನು ಕಂಡು ಮಮ್ಮಲ ಮರುಗಿದರು. ಹೇಗಾದರೂ ಮಾಡಿ ಮನೆಗೆ ಹಿಂದಿರುಗಬೇಕೆಂದು ಪರಿಪರಿಯಾಗಿ ಬೇಡಿಕೊಂಡರು. ಅವರ ಈ ಬೇಡಿಕೆಗೆ ಕಲ್ಲೇ ಕರಗಬೇಕಾಗಿತ್ತು.

ಸಾಧುಗಳು ತಮ್ಮ ಅಚಲ ನಿರ್ಧಾರದಿಂದ ಹಿಂತೆಗೆಯಲಿಲ್ಲ. ಅಲಗಮ್ಮಾಳ್ ತಮ್ಮ ವಿಧಿಗಾಗಿ ಮರುಗಿದರು. ಅವರಿಗೊದಗಿದ ಈ ದುಗುಡ ಜಗತ್ತಿಗೆ ಮುಂದೆ ಉತ್ತಮ ನಿಧಿಯಾಗಿ ಪರಿಣಮಿಸಿತು.

ಪ್ರತಿದಿನವೂ ಅಲಗಮ್ಮಾಳ್‌ರವರು ಮಗನ ಮನವೊಲಿಸಲು ಸಕಲ ಪ್ರಯತ್ನ ಮಾಡುತ್ತಿದ್ದರು. ಮಿಠಾಯಿ ಮುಂತಾದ ರಸನೇಂದ್ರಿಯ ಪ್ರಚೋದಕ ತಿನಿಸುಗಳನ್ನು ತಂದು, ವಿಧವಿಧವಾಗಿ ತಿರುಚ್ಚುಳಿಗೆ ಹಿಂತಿರುಗಬೇಕೆಂದು ಕೇಳಿದರು. ಒಂದು ದಿನವಂತೂ ಅವರ ರೋದನಕ್ಕೆ ಮಿತಿಯೇ ಇಲ್ಲವಾಯಿತು. ಇವನ್ನು ಕಂಡು ಸ್ವಾಮಿಗಳು ಸಹಿಸಲಾರದೆ ಆ ಸ್ಥಳವನ್ನು ಬಿಟ್ಟು ಹೊರಟು ಬಿಟ್ಟರು. ಆದರೂ, ಅಲಗಮ್ಮಾಳ್ ತಮ್ಮ ಪ್ರಯತ್ನವನ್ನು ಬಿಡಲಿಲ್ಲ; ಮಾತೃಪ್ರೇಮ ಏನನ್ನು ತಾನೆ ಮಾಡಿಸದು ?

ಮಾರನೆಯ ದಿನ ಅಲಗಮ್ಮಾಳ್ ಸ್ವಾಮಿಗಳನ್ನು ಹುಡುಕಿ ತನ್ನ ಕಟ್ಟ ಕಡೆಯ ಪ್ರಯತ್ನವನ್ನು ನಡೆಸಿದರು. ಸ್ವಾಮಿಗಳು ಜಗ್ಗಲಿಲ್ಲ. ಸರಿ, ನೆರೆದ ಭಕ್ತವೃಂದ ತಮ್ಮ ನೆರವಿಗೆ ಬರಬೇಕೆಂದು ಕೇಳಿ ತಮ್ಮ ಕರುಣಾಜನಕ ಕಥೆಯನ್ನು ವಿವರಿಸಿದರು. ಆಗ ಪಚ್ಚೈಯ್ಯಪ್ಪಪಿಳ್ಳೆಯೆಂಬ ಭಕ್ತ ಸ್ವಾಮಿಗಳಿಗೆ "ಸ್ವಾಮಿ, ನಿಮ್ಮ ತಾಯಿ ಇಷ್ಟು ಬೇಡಿಕೊಂಡರೂ ಒಂದು ಉತ್ತರ ಹೇಳುವಷ್ಟು ಕರುಣೆ ಹುಟ್ಟಲಿಲ್ಲವೇ ? ತಮ್ಮ ನಿರ್ಧಾರವನ್ನಾದರೂ ತಿಳಿಸಿ. ಮಾತನಾಡದಿದ್ದರೂ ಹೋಗಲಿ ಬರೆದಾದರೂ ಸೂಚಿಸಿ" ಎಂದು ಕಾಗದವನ್ನು

ಅವರ ಮುಂದೆ ಇಟ್ಟನು. ಸ್ವಾಮಿಗಳು ಯತ್ನವಿಲ್ಲದೆ ಈ ರೀತಿ ತಮಿಳಿನಲ್ಲಿ ಬರೆದರು.

"ಜಗದ್ರಕ್ಷಕನು ಸಕಲ ಜೀವಿಗಳನ್ನು ಅವರವರ ಕರ್ಮಾನುಸಾರ ಆಡಿಸುವನು. ಎಷ್ಟು ಪ್ರಯತ್ನಪಟ್ಟರೂ ಆಗಬಾರದೆಂಬುದು ಆಗುವುದೇ ಇಲ್ಲ. ಯಾರೆಷ್ಟು ಅಡ್ಡಿಪಡಿಸಿದರೂ ನಡೆಯಬೇಕಾದದ್ದು ನಡೆದೇ ನಡೆಯುವುದು. ಇದುವೇ ನಿತ್ಯ ಸತ್ಯ. ಆದ್ದರಿಂದ ಮೌನವೇ ಮೇಲು."

ಸ್ವಾಮಿಗಳ ಈ ಅಚಲ ನಿರ್ಧಾರವನ್ನು ಕಂಡು ನಿರ್ವಾಹವಿಲ್ಲದೆ ಬೇರೆ ದಾರಿ ತೋರದೆ ನಾಗಸ್ವಾಮಿಯೊಡನೆ ಅಲಗಮ್ಮಾಳ್ ಊರಿಗೆ ಹಿಂತಿರುಗಿದರು. ಸ್ವಾಮಿಗಳು ತಮಗೊದಗಿದ ವಿಷಮ ಪರೀಕ್ಷೆಯಲ್ಲಿ ಅಪೂರ್ವ ಯಶಸ್ಸು ಗಳಿಸಿದರು.

ಇಂಥ ಸತ್ವ ಪರೀಕ್ಷೆಗಳು ವಿಶ್ವದ ಮಹಾತ್ಮರಾದವರ ಜೀವನದಲ್ಲಿ ಹೊಸತೇನಲ್ಲ.

ಒರೆಗಲ್ಲಿನ ಮೇಲೆ ಚಿನ್ನದ ಯೋಗ್ಯತೆಯೂ, ಕಷ್ಟಕಾಲದಲ್ಲಿ ಬಂಧುಗಳ ಮನೋಧರ್ಮವೂ ಗೊತ್ತಾಗುವಂತೆ, ಮಮಕಾರಕ್ಕೆ ಆಸ್ಪದವಾದ ಸಂದರ್ಭದಲ್ಲಿ ಸಾಧಕನ ಸಾಮರ್ಥ್ಯವು ತಿಳಿದುಬರುತ್ತದೆ. ಪ್ರಕೃತ ಮಮತೆಯ ತಾಯಿಯ ಬೋಧೆಗೂ ಜಗ್ಗದೆ ಹೋದ ವೆಂಕಟರಮಣ ನಿಜವಾಗಿಯೂ ಹುಟ್ಟು ಸನ್ಯಾಸಿ, ಕಾರಣಪುರುಷನೆಂಬುದನ್ನು ಸ್ಪಷ್ಟಪಡಿಸಿದ.



## ೯

## ಶ್ರೀ ರಮಣ ಮಹರ್ಷಿ

ಈ ಹೊತ್ತಿಗಾಗಲೇ ಸ್ವಾಮಿಗಳು ಭಾರತದ ಮೂಲೆಮೂಲೆಯಲ್ಲಿನ ಭಕ್ತರನ್ನು ತಮ್ಮೆಡೆಗೆ ಆಕರ್ಷಿಸಲಾರಂಭಿಸಿದ್ದರು. ೧೯೦೩ ಮತ್ತು ೧೯೦೪ರ ಸಮಯದಲ್ಲಿ ಕಾವ್ಯಕಂಠ ಗಣಪತಿಶಾಸ್ತ್ರಿಗಳೆಂಬ ಹೆಸರಾಂತ ಪಂಡಿತರು ಸ್ವಾಮಿಗಳ ದರ್ಶನಾಕಾಂಕ್ಷಿಗಳಾಗಿ ಬಂದರು.

ಶ್ರೀ ಗಣಪತಿಶಾಸ್ತ್ರಿಗಳು ಸಾಮಾನ್ಯರಲ್ಲ; ಉದ್ದಾಮ ಸಂಸ್ಕೃತ ವಿದ್ವಾಂಸರು; ಮಹಾಕವಿಗಳು. ಏಕಕಾಲದಲ್ಲಿ ಅನೇಕಾನೇಕ ವಿಷಯಗಳನ್ನರಿಯಬಲ್ಲ ಚಾಣಾಕ್ಷತೆ ಇವರಲ್ಲಿ ಮನೆ ಮಾಡಿತ್ತು. ಕೇವಲ ೧೦ ವರ್ಷದವರಾಗಿರುವಾಗ ಇವರು ಸಂಸ್ಕೃತ ಭಾಷೆಯಲ್ಲಿ ಶ್ಲೋಕಗಳನ್ನು ರಚಿಸಿದ್ದರು. ೧೬ನೆಯ ವಯಸ್ಸಿನಲ್ಲಿ ಕಾಳಿದಾಸನ ಮೇಘಸಂದೇಶವನ್ನು ಹೋಲುವ 'ಭೃಂಗಸಂದೇಶ' ಎಂಬ ಕಾವ್ಯವನ್ನು ಎರಡು ಸರ್ಗಗಳಲ್ಲಿ ರಚಿಸಿದರು. ತಮ್ಮ ೧೪ನೆಯ ವಯಸ್ಸಿನಲ್ಲಾಗಲೇ ಪರಿಪೂರ್ಣ ಪಾಂಡಿತ್ಯಗಳಿಸಿದ್ದರು. ಸಂಸ್ಕೃತ ಭಾಷೆಯಲ್ಲಿ ಬರೆಯುವ ಮತ್ತು ಮಾತನಾಡುವ ಶಕ್ತಿಯನ್ನು ಸಂಪಾದಿಸಿದ್ದರು. ೧೮ನೆಯ ವಯಸ್ಸಿನಲ್ಲಿ ಇವರಿಗೆ ವಿವಾಹವಾಯಿತು. ಇವರಿಗೆ ಮಹಾತ್ಮರಾಗಬೇಕೆಂಬ ಬಯಕೆ ಉತ್ಪನ್ನವಾಗಿ ಭಾರತದ ಪವಿತ್ರ ಕ್ಷೇತ್ರಗಳ ಯಾತ್ರೆಯನ್ನು ಹತ್ತಾರುಬಾರಿ ಮುಗಿಸಿದರು. ಶಿವಪಂಚಾಕ್ಷರಿ ಮಂತ್ರ ಜಪಕ್ಕಾಗಿ ಬಹುಕಾಲ ಕಳೆದರು. ಇದಾವುದೂ ಅವರಿಗೆ ಶಾಂತಿ ತರಲಿಲ್ಲ; ಜೀವನದ ಮಹತ್ವಾಕಾಂಕ್ಷೆ ಈಡೇರಲಿಲ್ಲ. ೧೯೦೦ರಲ್ಲಿ ನವದ್ವೀಪದಲ್ಲಿ ನಡೆದ ವಿದ್ವತ್ಸಭೆಯಲ್ಲಿ ಈವರಿಗೆ 'ಕಾವ್ಯಕಂಠ' ಎಂಬ ಮಹತ್ತರವಾದ ಪ್ರಶಸ್ತಿ ಪ್ರಾಪ್ತವಾಯಿತು. ಇಂತಹ ಮಹಾವ್ಯಕ್ತಿ ೧೯೦೩ರಲ್ಲಿ ತಪಸ್ಸು ಮಾಡಲೆಂದು ತಿರುವಣ್ಣಾಮಲೆಗೆ ಆಗಮಿಸಿದರು. ಅಲ್ಲಿಯೇ ಇವರಿಗೆ ಸ್ವಾಮಿಗಳ ಪ್ರಥಮ ದರ್ಶನವಾಯಿತು. ಒಂದು ವರ್ಷದ ನಂತರ ವೆಲ್ಲೂರಿಗೆ ಶಾಲಾ ಉಪಾಧ್ಯಾಯರಾಗಿ ಹಿಂತಿರುಗಿದರು. ಆದರೆ ತಿರುವಣ್ಣಾಮಲೆ ಅವರನ್ನು ಆಕರ್ಷಿಸುತ್ತಲೇ

ಇತ್ತು. ೧೯೦೭ರ ಡಿಸೆಂಬರ್ ತಿಂಗಳಲ್ಲಿ ಅವರು ಉಪಾಧ್ಯಾಯ ವೃತ್ತಿಗೆ ರಾಜೀನಾಮೆ ಇತ್ತು ತಿರುವಣ್ಣಾಮಲೆಗೆ ಬಂದರು. ಅವರಿಗೆ ತಪಸ್ಸಿನ ಸ್ವರೂಪ ಕೊಂಚವೂ ಗೋಚರವಾಗಿರಲಿಲ್ಲ. ಸಂಸ್ಕಾರವಿಲ್ಲದವಂಗೆ ಸಿದ್ಧಿಯಾಗುವು ದೆಂತು ?

ಕಾರ್ತಿಕ ಹಬ್ಬದ ೯ನೆಯ ದಿನ. ಆಗಲೇ ಮಧ್ಯಾಹ್ನ ೧ ಗಂಟೆಯಾ ಗಿತ್ತು. ಗಣಪತಿಶಾಸ್ತ್ರಿಗಳಿಗೆ ಇದ್ದಕ್ಕಿದ್ದಂತೆ ಸ್ವಾಮಿಗಳ ಜ್ಞಾಪಕ ಬಂತು. "ಸ್ವಾಮಿಗಳವರಿಗೆ ತಪಸ್ಸಿನ ನೈಜ ಸ್ವರೂಪ ಮತ್ತು ಅದರ ರಹಸ್ಯ ಗೊತ್ತಾ ಗಿರಲೇಬೇಕು. ನನಗಿರುವ ಸಂಶಯ ನಿವಾರಣೆಯನ್ನು ಅವರೇ ಮಾಡ ಬಲ್ಲರು" ಎಂದು ಯೋಚಿಸಿದವರೇ ಆ ಮಧ್ಯಾಹ್ನದ ಉರಿಬಿಸಿಲಿನಲ್ಲಿಯೇ ಬೆಟ್ಟ ಹತ್ತಿ ಮೇಲಕ್ಕೆ ಬಂದರು.

ಶಾಸ್ತ್ರಿಗಳು ವಿರೂಪಾಕ್ಷ ಗುಹೆಗೆ ಬಂದಾಗ ಸ್ವಾಮಿಗಳು ಹೊರಗಿನ ಅಂಗಳದಲ್ಲಿ ವಿರಾಮವಾಗಿ ಕುಳಿತಿದ್ದರು. ಅವರು ಬಂದವರೇ ಸ್ವಾಮಿಗಳವ ರಿಗೆ ಸಾಷ್ಟಾಂಗ ಪ್ರಣಾಮಮಾಡಿ ಪಾದಗಳನ್ನು ಹಿಡಿದು, "ಸ್ವಾಮಿ, ನಾನೆಷ್ಟು ಓದಬೇಕೆಂದಿದ್ದೆನೋ ಅಷ್ಟನ್ನೂ ಓದಿದ್ದೇನೆ. ವೇದಾಂತಶಾಸ್ತ್ರ ಚೆನ್ನಾಗಿ ಅರ್ಥ ಮಾಡಿಕೊಂಡಿದ್ದೇನೆ. ಮನದಣಿಯುವಂತೆ ಶಿವಪಂಚಾಕ್ಷರಿ ಜಪ ಮಾಡಿದ್ದೇನೆ. ಅನೇಕ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿದ್ದೇನೆ. ಆದರೂ ತಪಸ್ಸೆಂದರೆ ಏನೆಂ ಬುದು ತಿಳಿದಿಲ್ಲ. ಆತ್ಮಶಾಂತಿ ಸಿಗಲಿಲ್ಲ. ಕೃಪೆಮಾಡಿ ಅದರ ಸ್ವರೂಪವನ್ನು ತಿಳಿಸಿ ಅನುಗ್ರಹಿಸಬೇಕು" ಎಂದು ಪ್ರಾರ್ಥಿಸಿದರು. ಅವರ ಧ್ವನಿಯು ಕಂಪಿ ಸುತ್ತಿತ್ತು. ಸ್ವಾಮಿಗಳು ಎವೆಯಿಕ್ಕದೆ ಶಾಸ್ತ್ರಿಗಳನ್ನು ನೋಡಿ ಈರೀತಿ ತಪ ಸ್ಸಿನ ಸ್ವರೂಪವನ್ನು ಅರ್ಥಗರ್ಭಿತವಾಗಿ ತಿಳಿಸಿದರು:

"ಎಲ್ಲಿಂದ ನಾನು ಎಂಬ ಭಾವನೆ ಹೊರಹೊಮ್ಮುತ್ತದೆ ಎಂಬುದರಲ್ಲಿ ತನ್ಮಯನಾಗಿದ್ದರೆ ಮನಸ್ಸು ಅದರಲ್ಲಿ ಲೀನವಾಗುತ್ತದೆ. ಅದೇ ತಪಸ್ಸು ಮಂತ್ರವನ್ನು ಜಪಿಸುವಾಗ ಮಂತ್ರೋಚ್ಚಾರಣೆ ಬಂದುದೆಲ್ಲಿಂದ ಎಂಬುದರ ಕಡೆಗೆ ಗಮನವಿಟ್ಟಾಗ ಮನಸ್ಸು ಅದರಲ್ಲಿ ಲೀನವಾಗುತ್ತದೆ. ಅದೇ ತಪಸ್ಸು."

ಮಹತ್ಸಮಸ್ಯೆಯಿಂದ ಭಾರವಾಗಿದ್ದ ಶಾಸ್ತ್ರಿಗಳ ಮನಸ್ಸು ಹಗುರಾಯಿತು. ಹೃದಯ ಆನಂದ ತುಂದಿಲವಾಯಿತು. ಅಲ್ಲಿಯೇ ಕೆಲವು ಗಂಟೆಗಳ ಕಾಲವಿದ್ದು ಸ್ವಾಮಿಗಳ ಪೂರ್ವೋತ್ತರಗಳನ್ನು ವಿಚಾರಿಸಿಕೊಂಡರು. ಅವರ ನಾಮಧೇಯ 'ವೆಂಕಟರಮಣ' ಎಂದು ಇದ್ದುದಾಗಿ ಗೊತ್ತಾಯಿತು. ಮರುಕ್ಷಣದಲ್ಲಿಯೇ ಶಾಸ್ತ್ರಿಗಳು ತಮ್ಮ ಆಶುಕವಿತಾ ಪ್ರಭಾವದಿಂದ ಸ್ವಾಮಿಗಳ ಸ್ತೋತ್ರರೂಪವಾದ ಪಂಚಪದ್ಯಮಾಲಿಕೆಯೊಂದನ್ನು ರಚಿಸಿದರು. ಈ ಪದ್ಯಮಾಲೆಯಲ್ಲಿ ಅವರು ಸ್ವಾಮಿಗಳನ್ನು 'ರಮಣ' ಎಂದು ಸಂಬೋಧಿಸಿದರು. ಅಂದಿನಿಂದ ಸ್ವಾಮಿಗಳಿಗೆ 'ರಮಣ' ಎಂಬ ಹೆಸರೇ ಪ್ರಾಪ್ತವಾಯಿತು. ಆ ಹೆಸರಿನಲ್ಲಿ 'ವೆಂಕಟ' ಎಂಬ ಶಬ್ದ ಮಾಯವಾಯಿತು.

ಮಾರನೆಯ ದಿನ ಶಾಸ್ತ್ರಿಗಳು ತಮ್ಮ ಶಿಷ್ಯರಿಗೂ ಅಲ್ಲಿಯ ಭಕ್ತವೃಂದಕ್ಕೂ ಸ್ವಾಮಿಗಳ ಮಹಾತ್ಮೆಯನ್ನು ವಿವರಿಸುತ್ತ ಅವರು ಮಹಾ ಋಷಿಪುಂಗವರೆಂದು ಹೇಳಿದರು. ಅವರು ತಮ್ಮ ಬಂಧುಮಿತ್ರರು ಮತ್ತು ಶಿಷ್ಯವರ್ಗಕ್ಕೆ ಬರೆದ ಪತ್ರದಲ್ಲಿ ರಮಣರ ಮಹಾತ್ಮೆಯು ಅದ್ಭುತವಾದುದೆಂದೂ ಅವರನ್ನು ಇನ್ನು ಮೇಲೆ 'ಶ್ರೀ ರಮಣಮಹರ್ಷಿ' ಎಂದು ಕರೆಯಬೇಕೆಂದೂ ಸೂಚಿಸಿದರು.

ಅಂದಿನಿಂದ ಭಕ್ತವೃಂದದಲ್ಲಿ ಇವರು ಶ್ರೀ ರಮಣಮಹರ್ಷಿಗಳೆಂದು ಹೆಸರಾಂತರು.

"ಶಾಸ್ತ್ರವೆಂಬ ಮೊಸರನ್ನು ಸಂಕಲ್ಪವೆಂಬ ಭಾಂಡದಲ್ಲಿ ಹಾಕಿ ವಿಚಾರವೆಂಬ ಕಡಗೋಲಿನಿಂದ ಕಡೆದರೆ ಅದರಲ್ಲಿ ಸಾರಭೂತವಾದ ಬೆಣ್ಣೆಯೂ ನಿಸ್ಸಾರರೂಪವಾದ ಮಜ್ಜಿಗೆಯೂ ಬರುತ್ತದೆ. ಯೋಗಿಗಳು ಬೆಣ್ಣೆಯನ್ನು ತಿಂದು ಸುಮ್ಮನಿರುತ್ತಾರೆ. ಪಂಡಿತರು ಮಜ್ಜಿಗೆಗಾಗಿ ಒದ್ದಾಡುತ್ತಾರೆ." ಎಂದು ಸ್ವಾಮಿ ವಿವೇಕಾನಂದರು ಒಮ್ಮೆ ಹೇಳಿದ ಮಾತು ಶ್ರೀ ರಮಣಮಹರ್ಷಿ-ಗಣಪತಿಶಾಸ್ತ್ರಿಗಳ ಸಮಾಗಮದಲ್ಲಿ ನೆನಪಿಗೆ ತರುತ್ತದೆ.



## ೧೦

## ಭಕ್ತವೃಂದ (i)

ಸಕ್ಕರೆಯು ಸ್ವತಃ ಇರುವೆಗಳನ್ನು ಎಂದೂ ಸ್ವಾಗತಿಸಲು ಹೋಗುವು ದಿಲ್ಲ. ಅದಿದ್ದಲ್ಲಿಗೆ ಇರುವೆಗಳು ತಾವೇ ತಾವಾಗಿ ಬರುತ್ತವೆ. ಸಕ್ಕರೆಯನ್ನು ಮನಸಾರ ತಿಂದು ತೃಪ್ತಿ ಪಡೆಯುತ್ತವೆ. ಸುಗಂಧ ಪುಷ್ಪಗಳು ದುಂಬಿಗಳನ್ನು ತಮ್ಮೆಡೆಗೆ ಎಂದೂ ಆಹ್ವಾನಿಸುವುದಿಲ್ಲ. ಆದರೆ ದುಂಬಿಗಳೇ ಹೂಗಳೆಡೆಗೆ ಬಂದು ಅದರ ಮಧುವನ್ನು ಹೀರಿ ನಲಿಯುತ್ತವೆ. ಹಾಗೆಯೇ ಮಹಾ ವಿಭೂತಿಗಳಾದವರು ಭಕ್ತರನ್ನು ಹುಡುಕಿಕೊಂಡು ಹೋಗುವುದಿಲ್ಲ. ಗುರು ಗಳನ್ನರಸಿ ಭಕ್ತರೇ ಬರುತ್ತಾರೆ.

ರಮಣ ಮಹರ್ಷಿಗಳ ಬಳಿಗೆ ಸಕಲ ವಿಧವಾದ ಜನ ದಿನವೂ ಬರಲಾ ರಂಭಿಸಿದರು. ಭಿಕ್ಷುಕರು, ವಿದ್ವಾಂಸರು, ಆತ್ಮಸಾಕ್ಷಾತ್ಕಾರಕ್ಕಾಗಿ ಹಗಲಿರುಳು ಹಂಬಲಿಸುವವರು, ಸ್ವಾಮಿಗಳನ್ನು ಪರೀಕ್ಷಿಸಬೇಕೆನ್ನುವ ಕುತೂಹಲಿಗಳು ಹೀಗೆ ನಾನಾ ತರಹೆಯ ಜನಪ್ರವಾಹವೇ ಅಲ್ಲಿಗೆ ಬರಲಾರಂಭಿಸಿತು.

ಶ್ರೀ ರಮಣರು ಎಲ್ಲರನ್ನೂ ಒಂದೇ ಬಗೆಯಾಗಿ ಕಾಣುವರು. ಎಲ್ಲರಿಗೂ ಅದೇ ಔದಾರ್ಯ ತೋರುವರು. ಯಾವುದೇ ಬಗೆಯ ಭೇದ ಭಾವ ಯಾವ ಕಾಲದಲ್ಲೂ ಮಾಡುವಂತಿರಲಿಲ್ಲ.

ರಮಣ ಮಹರ್ಷಿಗಳ ಪಾದಪಾಸರೆಗೆ ಬಂದು ಜೀವನವನ್ನು ಪಾವನವಾಗಿ ಸಿಕೊಂಡ ಮಹನೀಯರ ಬಗೆಗೆ ನಾಲ್ಕು ಮಾತು ಹೇಳುವುದು ಅಗತ್ಯವಾಗಿದೆ.

### ೧. ಶ್ರೀ ಗಂಭೀರಂ ಶೇಷಯ್ಯ

ತಿರುವಣ್ಣಾಮಲೆಯ ನಗರ ಸಭೆಯಲ್ಲಿ ಓವರ್‌ಸಿಯರ್ ಆಗಿದ್ದ ಗಂಭೀರಂ ಶೇಷಯ್ಯ ೧೯೦೦ರಲ್ಲಿ ಪ್ರಥಮ ಬಾರಿ ರಮಣ ಮಹರ್ಷಿಗಳನ್ನು ಸಂದರ್ಶಿಸಿದರು. ಇವರು ರಾಮ ಭಕ್ತರು. ಯೋಗಮಾರ್ಗ ತಿಳಿಯಲು ಆಸಕ್ತರಾಗಿ ಅನೇಕ ಗ್ರಂಥಗಳನ್ನು ಪಠಿಸಿದ್ದರು. ಗ್ರಂಥಗಳನ್ನು ಓದುವಾಗ

ಉಂಟಾದ ಅನುಮಾನಗಳನ್ನು ಮಹರ್ಷಿಗಳ ಬಳಿ ಪರಿಹರಿಸಿಕೊಳ್ಳುತ್ತಿದ್ದರು. ಮಹರ್ಷಿಗಳು ಅವರ ಸಂದೇಹವನ್ನು ಪುಟ್ಟ ಪುಟ್ಟ ಕಾಗದದಲ್ಲಿ ಬರೆದ ಉತ್ತರದ ಮೂಲಕ ಪರಿಹರಿಸುತ್ತಿದ್ದರು. ಎಲ್ಲ ಪ್ರಶ್ನೋತ್ತರಗಳನ್ನೂ ಸಂಗ್ರಹಿಸಲಾಗಿತ್ತು. ಇವರ ಕಾಲಾನಂತರದಲ್ಲಿ ಈ ಬರೆಹ "ವಿಚಾರ ಸಂಗ್ರಹ" ಎಂದು ಗ್ರಂಥರೂಪದಲ್ಲಿ ಪ್ರಕಟವಾಯಿತು. ಇದೇ ಮಹರ್ಷಿಗಳ ಮುಖ್ಯ ಮೊದಲನೆಯ ಉಪದೇಶಸಾರವೆಂದು ಭಾವಿಸಬಹುದು.

## ೨. ಶ್ರೀ ಶಿವಪ್ರಕಾಶಂ ಪಿಳ್ಳೈ

ಇವರು ತತ್ವ ಶಾಸ್ತ್ರ ವಿದ್ವಾಂಸರು. ದಕ್ಷಿಣ ಆರ್ಕಾಟಿನ ಆದಾಯ ಶಾಖೆಯಲ್ಲಿ ಕೆಲಸದಲ್ಲಿದ್ದರು. ೧೯೦೨ರಲ್ಲಿ ತಿರುವಣ್ಣಾಮಲೆಗೆ ಸರ್ಕಾರಿ ಕೆಲಸದ ನಿಮಿತ್ತ ಆಗಮಿಸಿದ್ದರು. ಆಗ ಮಹರ್ಷಿಗಳನ್ನು ಸಂದರ್ಶಿಸಿದ್ದರು. ಚಿಕ್ಕಂದಿನಿಂದಲೂ ಇವರಿಗೆ 'ನಾನು ಯಾರು? ಜನನ ಮರಣಗಳ ಆದಿ ಅಂತ್ಯವೆಲ್ಲಿ?' ಎಂಬ ವಿಷಯದ ಬಗ್ಗೆ ಜಿಜ್ಞಾಸೆ ಮೂಡಿತ್ತು. ಆ ಮಹಾಪ್ರಶ್ನೆಯನ್ನು ಬಗೆಹರಿಸಿಕೊಳ್ಳುವ ಕಾಲ ಸನ್ನಿಹಿತವಾಗಿದ್ದಿತು.

ಶಿವಪ್ರಕಾಶಂ ಪಿಳ್ಳೈ ಪ್ರಶ್ನೆಗಳನ್ನು ಕೇಳಲು ಬಂದಾಗ ಸ್ವಾಮಿಗಳು ಮೌನದಲ್ಲಿದ್ದರು. ಆದುದರಿಂದ ಅವರಿಗೆ ಹಾಕಿದ ಪ್ರಶ್ನೆಗಳಿಗೆ ಸಂಜ್ಞೆಯಿಂದ ಇಲ್ಲವೆ ಕಪ್ಪುಹಲಗೆಯ ಮೇಲೆ ಬರೆಯುವುದರ ಮೂಲಕ ಉತ್ತರ ಕೊಡುತ್ತಿದ್ದರು. ಈ ಪ್ರಶ್ನೋತ್ತರ ಮತ್ತು ಮಹರ್ಷಿಗಳ ದರ್ಶನದಿಂದ ತಮಗಾದ ಅನುಭವಗಳನ್ನು 'ಅನುಗ್ರಹ ಅಹವಲ್' ಎಂಬ ತಮಿಳು ಕವಿತೆ ರಚಿಸಿ ೧೯೨೩ರಲ್ಲಿ ಪ್ರಕಟಿಸಿದರು. ಇದರಲ್ಲಿ ಸ್ವಾಮಿಗಳು ಮೆರೆದ ಪವಾಡಗಳ ವಿವರಣೆ ಇದೆ.

## ೩. ಕಾವ್ಯಕಂಠ ಶ್ರೀ ಗಣಪತಿಶಾಸ್ತ್ರಿ

ಮಹಾ ವಿದ್ವಾಂಸರೂ, ಆಶುಕವಿಗಳೂ, ತಪೋನಿಷ್ಠರೂ ಆದ ಇವರ ಬಗ್ಗೆ ಈಗಾಗಲೇ ಹಿಂದಿನ ಪ್ರಕರಣದಲ್ಲಿ ಹೇಳಲಾಗಿದೆ.

ಇವರು ೧೯೦೭ರಲ್ಲಿ ಪ್ರಥಮಬಾರಿ ಮಹರ್ಷಿಗಳನ್ನು ಸಂದರ್ಶಿಸಿದರು. ಅಂದಿನಿಂದ ಮರಣಕಾಲದವರೆಗೂ ಅವರು ಮಹರ್ಷಿಗಳ ಆಪ್ತಶಿಷ್ಯರಲ್ಲಿ ಒಬ್ಬ

ರಾಗಿದ್ದರು. ಶಾಸ್ತ್ರಿಗಳು ಮಹರ್ಷಿಗಳಿಂದ ಪಡೆದ ಉಪದೇಶದ ಫಲವಾಗಿ ಸಹಸ್ರ ಶ್ಲೋಕಗಳುಳ್ಳ 'ಉಮಾ ಸಹಸ್ರ' ಎಂಬ ಮಹಾಕಾವ್ಯ ರಚಿಸಿದರು.

ತಿರುವಣ್ಣಾಮಲೆಯನ್ನು ಬಿಟ್ಟು ಹೊರಡುವ ಸಮಯದಲ್ಲಿ ಗಣಪತಿ ಶಾಸ್ತ್ರಿಗಳು ಮಹರ್ಷಿಗಳ ಬಳಿಗೆ ಬಂದು "ನನ್ನ ಧ್ಯೇಯ ಈಡೇರಲು 'ನಾನು' ಉಳಿದು ಅದರ ಮೂಲ ಹುಡುಕುವುದು ಸಾಕೋ ? ಇಲ್ಲವೇ ಮಂತ್ರಧ್ಯಾನ ಅಗತ್ಯವೋ?"ಎಂದು ಪ್ರಶ್ನಿಸಿದರು. ಅದಕ್ಕೆ "'ನಾನು' ಎಂಬುದರ ಮೂಲವನ್ನು ಹುಡುಕು. ಈಶ್ವರನ ಮೇಲೆ ಎಲ್ಲ ಭಾರಹಾಕು. ಆತ ನೋಡಿಕೊಳ್ಳುತ್ತಾನೆ" ಎಂದರು. ಮುಂದಿನ ಕೆಲವರ್ಷಗಳಲ್ಲಿ ಶಾಸ್ತ್ರಿಗಳು ತಿರುವಣ್ಣಾಮಲೆಗೆ ಆಗಾಗ ಬರುತ್ತಿದ್ದರು.

ರಮಣ ಮಹರ್ಷಿಗಳು, ಶಾಸ್ತ್ರಿಗಳ ಕವಿತಾ ಶಕ್ತಿಯನ್ನೂ ಪಾಂಡಿತ್ಯವನ್ನು ಮೆಚ್ಚಿಕೊಂಡಿದ್ದರು. ಶಾಸ್ತ್ರಿಗಳ ಸಂಪರ್ಕ, ಮಹರ್ಷಿಗಳು ಸಂಸ್ಕೃತ ಭಾಷೆಯಲ್ಲಿ ಪ್ರಭುತ್ವ ಪಡೆಯಲು ಬಹಳ ಮಟ್ಟಿಗೆ ನೆರವಾಯಿತು. ಮಹರ್ಷಿಗಳು ಸ್ವತಃ ಅರುಣಾಚಲ ಪಂಚರತ್ನವನ್ನು೧೯೧೭ರಲ್ಲೂ,ಉಪದೇಶ ಸಾರವನ್ನು ೧೯೨೭ರಲ್ಲೂ ರಚಿಸಿದರು. ಇದೇ ಸಮಯದಲ್ಲಿ ಶ್ರೀ ಗಣಪತಿಶಾಸ್ತ್ರಿಗಳು ೧೯೧೩ ಮತ್ತು ೧೯೧೭ರಲ್ಲಿ ತಮ್ಮ ಮತ್ತು ಮಹರ್ಷಿಗಳೊಡನೆ ನಡೆದ ಪ್ರಶ್ನೋತ್ತರಗಳನ್ನು ಸೇರಿಸಿ 'ರಮಣ ಗೀತೆ' ಎಂಬ ೧೮ ಅಧ್ಯಾಯದ ಸಂಸ್ಕೃತ ಶ್ಲೋಕದ ಗ್ರಂಥವನ್ನು ರಚಿಸಿದರು.

## ೪. ಶ್ರೀ ಶೇಷಾದ್ರಿ ಸ್ವಾಮಿಗಳು

ರಮಣರ ಪರಮಾಪ್ತ ಸ್ನೇಹಿತರಾಗಿದ್ದ ಶೇಷಾದ್ರಿ ಸ್ವಾಮಿಗಳು ೧೮೮೯ರಲ್ಲಿ ತಿರುವಣ್ಣಾಮಲೆಗೆ ಬಂದು ನೆಲೆಸಿದರು. ಇವರಿಗೆ ಜನ ಸಂಸರ್ಗವೆಂದರೆ ಆಗುತ್ತಿರಲಿಲ್ಲ. ಎಷ್ಟೋಬಾರಿ ಇವರು ಹುಚ್ಚನಂತೆ ನಟಿಸುತ್ತಿದ್ದರು. ಪರಿಣಾಮವಾಗಿ ಇವರನ್ನು ಹುಚ್ಚರೆಂದೇ ಜನ ತಿಳಿಯಲು ಅವಕಾಶವಾಗಿತ್ತು. ಇದರಿಂದ ಇವರು ತರುಣವೃಂದದ ಕೀಟಲೆಗೆ ಗುರಿಯಾಗಬೇಕಾಯಿತು.

ಮಹರ್ಷಿಗಳು ಪ್ರಥಮತಃ ತಿರುವಣ್ಣಾಮಲೆಗೆ ಬಂದಾಗಿನಿಂದ ಶೇಷಾದ್ರಿಸ್ವಾಮಿಗಳು ಒಂದಲ್ಲೊಂದು ಬಗೆಯಿಂದ ಅವರಿಗೆ ನೆರವಾದರು. ಸಕಲ ಜಗತ್ತನ್ನು ಬ್ರಹ್ಮಸ್ವರೂಪವಾಗಿ ಕಾಣುತ್ತಿದ್ದ ಮಹಾಜ್ಞಾನಿಗಳಿವರು.

## ೫. ಶ್ರೀ ನಟನಾನಂದ ಸ್ವಾಮಿ

ಉಪಾಧ್ಯಾಯ ವೃತ್ತಿಯಲ್ಲಿದ್ದ ನಟೇಶ ಮೊದಲಿಯಾರ್ ೧೯೧೮ರಲ್ಲಿ ಸ್ಕಂದಾಶ್ರಮದಲ್ಲಿದ್ದ ಮಹರ್ಷಿಗಳನ್ನು ಪ್ರಥಮಬಾರಿ ಸಂದರ್ಶಿಸಿದರು. ಈತ ಮೊದಲಿನಿಂದಲೂ ಭಗವಾನ್ ರಾಮಕೃಷ್ಣ ಪರಮಹಂಸರಂಥ ಗುರುವನ್ನು ಅರಸುತ್ತಿದ್ದರು. ಪ್ರಥಮದರ್ಶನ ಕಾಲದಲ್ಲಿ ತಮ್ಮ ಮನದಾಸೆಯನ್ನು ಬಿತ್ತರಿಸಲಾರದೆ ಹಿಂದಿರುಗಿದರು. ಅನಂತರ ೧೯೨೦ರಲ್ಲಿ ಮೊದಲಿಯಾರ್ ದೀರ್ಘ ಪತ್ರವೊಂದನ್ನು ಬರೆದು ಸ್ವಾಮಿಗಳ ದರ್ಶನಕ್ಕೆ ಅಪ್ಪಣೆ ಬೇಡಿದರು. ತಿಂಗಳು ಕಳೆದರೂ ಉತ್ತರ ಬರಲಿಲ್ಲ. ಪತ್ರ ತಲ್ಪಿದ್ದಕ್ಕಾದರೂ ಉತ್ತರಿಸುವಂತೆ ಆಗ್ರಹ ಮಾಡಿದರು. ಸ್ವಲ್ಪಕಾಲದನಂತರ ಮಹರ್ಷಿಗಳ ಕಡೆಯಿಂದ ಕಾಗದವೊಂದು ಬಂತು. 'ಸ್ವಾಮಿಗಳು ಪತ್ರಮುಖೇನ ಉತ್ತರಿಸುವುದಿಲ್ಲ; ಪ್ರತ್ಯಕ್ಷವಾಗಿ ಬಂದು ದರ್ಶನ ಪಡೆದು ಕೇಳಿ' ಎಂಬುವೇ ಪತ್ರದ ಆದೇಶವಾಗಿದ್ದಿತು.

೧೯೨೦ರ ಮೇ ತಿಂಗಳಲ್ಲಿ ಮೊದಲಿಯಾರ್ ತಿರುವಣ್ಣಾಮಲೆಗೆ ಬಂದು ಮಹರ್ಷಿಗಳನ್ನು ಸಂದರ್ಶಿಸಿದರು. ರಮಣ ಮಹರ್ಷಿಗಳು ಯಾವ ಮಾತನ್ನೂ ಆಡಲಿಲ್ಲ. ಅವರು ಆರು ಗಂಟೆಗಳ ಕಾಲ ಅಖಂಡವಾಗಿ ಕಾದು ಕೊನೆಗೆ ರಾತ್ರಿ ಸ್ವಾಮಿಗಳು ಭೋಜನಕ್ಕೆ ಹೊರಡುವ ಸಮಯದಲ್ಲಿ ಪಕ್ಕದಲ್ಲಿದ್ದವರೊಬ್ಬರು ನಟೇಶ ಮೊದಲಿಯಾರರನ್ನು ತೋರಿಸಿ ಕಾಗದಗಳನ್ನು ಬರೆದವರು ಇವರೇ ಎಂದರು; ಮಹರ್ಷಿಗಳು ದೃಷ್ಟಿಸಿನೋಡಿ ಮುಂದುವರಿದರು. ಯಾವ ಮಾತುಕತೆಗಳೂ ನಡೆಯಲಿಲ್ಲ. ಇದೇರೀತಿ ಒಂದೇವರ್ಷ ಉರುಳಿತು. ಈ ಮಧ್ಯೆ ಆಗಾಗ ನಟೇಶ ಮೊದಲಿಯಾರರ ಕನಸಿನಲ್ಲಿ ಮಹರ್ಷಿಗಳು ದರ್ಶನವಿತ್ತು ದಾರಿತೋರಿಸುತ್ತಿದ್ದರಂತೆ.

೧೯೩೩ರಲ್ಲಿ ನಟೇಶ ಮೊದಲಿಯಾರ್ ತಮಗೆ ಸಂನ್ಯಾಸ ಸ್ವೀಕರಿಸಬೇಕೆಂಬ ಬಯಕೆಯುಂಟಾಗಿದೆಯೆಂದು ಮಹರ್ಷಿಗಳಿಗೆ ವಿಜ್ಞಾಪಿಸಿಕೊಂಡರು. ಮಹರ್ಷಿಗಳ ಕೃಪೆ ಈತನ ಮೇಲಾಯಿತು. ಈತನ ಮನೆಯವರ ಕನಸಿನಲ್ಲಿ ಮಹರ್ಷಿಗಳು ಬಂದು, 'ನಟೇಶನ ಮೇಲೆ ನನ್ನ ಅನುಗ್ರಹವಿದೆ; ಆತನ ಕಾರ್ಯಕ್ಕೆ ಅಡ್ಡಿ ತರಬೇಡಿ' ಎಂದರಂತೆ. ೧೯೨೯ರಲ್ಲಿ ನಟೇಶನು ಸಂನ್ಯಾಸ ಸ್ವೀಕರಿಸಿ ನಟನಾನಂದನಾದರು. ಇವರು ಮಹರ್ಷಿಗಳ ವಚನಾಮೃತವನ್ನು ಗೀತೆಗಳಾಗಿ ರಚಿಸಿ 'ರಮಣ ಶತಕ', 'ರಮಣ ಅಂತಾದಿ', 'ರಮಣ ಸ್ತೋತ್ರ ಷೋಡಶಂ' 'ರಮಣನಾನ್ ಮಣಿಮಾಲೆ' ಇವೇ ಮೊದಲಾದ ಪುಸ್ತಕಗಳನ್ನು ಪ್ರಕಾಶಗೊಳಿಸಿದ್ದಾರೆ.

ಮಹರ್ಷಿಗಳ ಮಾತು ಸುಳ್ಳಾಗಲಿಲ್ಲ. ನಟನಾನಂದ ಮತ್ತೆ ನಟೇಶಮೊದಲಿಯಾರರಾಗಬೇಕಾಯಿತು. ಈತ ಮತ್ತೆ ಗೃಹಸ್ಥ ಜೀವನ ಕೈಗೊಂಡು ಉಪಾಧ್ಯಾಯವೃತ್ತಿಯನ್ನೇ ಅವಲಂಬಿಸಬೇಕಾಯಿತು.

## ೬. ಶ್ರೀ ಬಿ. ವಿ. ನರಸಿಂಹಸ್ವಾಮಿ.

ಮದರಾಸಿನ ಪ್ರಖ್ಯಾತ ವಕೀಲರೂ, ಅನೇಕ ವರ್ಷಗಳ ಕಾಲ ಅಲ್ಲಿನ ಶಾಸನ ಸಭೆಯ ಸದಸ್ಯರೂ ಆಗಿದ್ದ ಶ್ರೀ ಬಿ. ವಿ. ನರಸಿಂಹಅಯ್ಯರ್ ರವರು ೧೯೩೦ರಲ್ಲಿ ಮಹರ್ಷಿಗಳ ಆಶ್ರಮಕ್ಕೆ ಬಂದರು. ಶ್ರೀಯುತರು ಪಾಶ್ಚಾತ್ಯತತ್ವ ಶಾಸ್ತ್ರದಲ್ಲಿಯೂ ಸಂಸ್ಕೃತ ವೇದಾಂತ ಶಾಸ್ತ್ರದಲ್ಲಿಯೂ ಪಾರಂಗತರಾಗಿದ್ದರು. ಇವರೇ ಮೊಟ್ಟಮೊದಲನೆಯ ಸಾರಿ ಇಂಗ್ಲೀಷ್ ಭಾಷೆಯಲ್ಲಿ 'ಆತ್ಮ ಸ್ವರೂಪ ದರ್ಶನ' ( Self Realisation ) ಎಂಬ ಪುಸ್ತಕವನ್ನು ಬರೆದರು

ಮೇಲೆ ವಿವರಿಸಲ್ಪಟ್ಟವರೆಲ್ಲ ಮಹರ್ಷಿಗಳ ಭಕ್ತರಲ್ಲಿ ಅತಿ ಮುಖ್ಯರೆನ್ನಬಹುದು. ಇನ್ನುಳಿದ ಭಕ್ತಕೋಟಿಯಲ್ಲಿ ತಿರುವಣ್ಣಾಮಲೆಯ ಪಿ. ಡಬ್ಲ್ಯು ಸೂಪರ್‌ವೈಜರ್ ಆಗಿದ್ದ ರಾಮಸ್ವಾಮಯ್ಯರ್, ಅರುಣಾಚಲಪ ರಾಘವಾಚಾರಿ, ತಂಜಾವೂರು ಜಿಲ್ಲೆಯ ರಾಮನಾಥಯ್ಯರ್, ನೆಲ್ಲೂರು ಜಿಲ್ಲೆಯ ಯೋಗಿರಾಮಯ್ಯ, ತಮಿಳು ಸಾಹಿತಿ ಶುದ್ಧಾನಂದ ಭಾರತಿ ಇವರನ್ನು ಸ್ಮರಿಸಬಹುದು.

ಮಹರ್ಷಿಗಳಿಗೆ ಸ್ತ್ರೀ ಪುರುಷರೆಂಬ ಭೇದವಿರಲಿಲ್ಲ. ಎಲ್ಲರೂ ಭಕ್ತರೇ. ದೇವಸಾನ್ನಿಧ್ಯದಲ್ಲಿ ಎಲ್ಲರೂ ಸಮಾನರೇ. ಆದುದರಿಂದ ಮಹರ್ಷಿಗಳ ಆಶ್ರಯದಲ್ಲಿ ಸ್ತ್ರೀಭಕ್ತರೂ ಇದ್ದರು. ಇವರಲ್ಲಿ ಸೊಪ್ಪಿನ ಅಜ್ಜಿ, ಮಂಡಕೊಳತೂರಿನ ಎಚ್ಚಮ್ಮಾಳ್, ಸ್ತೋತ್ರಗಳನ್ನು ಹಾಡುತ್ತಿದ್ದ ತಿರುಪ್ಪುಗಳ್ ಅಮ್ಮ, ರಾಮನಾಡಿನ ಶಾಂತಮ್ಮಾಳ್‌ರವರು ಮುಖ್ಯರು.

ಮಹರ್ಷಿಗಳು ಭಾರತೀಯರನ್ನು ಹೇಗೆ ಆಕರ್ಷಿಸಿದ್ದರೋ ಅಷ್ಟೇ-ಅದೇಕೆ ಅದಕ್ಕೂ ಹೆಚ್ಚಾಗಿ ವಿದೇಶೀಯರನ್ನು ಆಕರ್ಷಿಸಿದ್ದರು. ಅನೇಕ ಜನ ವಿದೇಶದ ಭಕ್ತರು ರಮಣಾಶ್ರಮಕ್ಕೆ ಬಂದು, ಮಹರ್ಷಿಗಳ ಸನ್ನಿಧಿಯಲ್ಲಿ ನಿಂತು ಅವರ ದರ್ಶನಾಶೀರ್ವಾದ ಪಡೆಯುತ್ತಿದ್ದರು. ಇಂಥ ವಿದೇಶೀ ಭಕ್ತರ ಬಗ್ಗೆ ಇಲ್ಲಿ ಕೆಲವು ಸಂಗತಿಗಳನ್ನು ಕೊಟ್ಟಿದೆ.

## ೧. ಎಫ್ ಎಚ್. ಹಂಫ್ರೀಸ್ (ii)

ಇವರು ೧೯೧೧ರಲ್ಲಿ ಪೋಲೀಸ್ ಇಲಾಖೆಯ ಅಸಿಸ್ಟೆಂಟ್ ಸೂಪರಿಂಟೆಂಡೆಂಟ್ ಕೆಲಸಕ್ಕೆ ಸೇರಿ ವೆಲ್ಲೂರಿಗೆ ಶಿಕ್ಷಣ ಪಡೆಯಲು ಬಂದಿದ್ದರು. ವೆಲ್ಲೂರಿನಲ್ಲಿ ತಮಿಳು ಭಾಷೆಯನ್ನು ಕಲಿಯುತ್ತಿದ್ದಾಗ ರಮಣ ಮಹರ್ಷಿಗಳ ಅನೇಕ ವಿಷಯಗಳನ್ನು ತಿಳಿದರು. ಕೆಲವು ಕಾಲದನಂತರ ಇವರು ತಿರುವಣ್ಣಾಮಲೆಗೆ ಬಂದು ಮಹರ್ಷಿಗಳನ್ನು ಸಂದರ್ಶಿಸಿ ತಮ್ಮ ಸಂದೇಹ ನಿವಾರಣೆ ಮಾಡಿಕೊಂಡರು. ಇವರು ಮಹರ್ಷಿಗಳೊಡನೆ ನಡೆಸಿದ ತಮ್ಮ ಸಂಭಾಷಣೆಯ ವಿಷಯವನ್ನು ಇಂಗ್ಲೆಂಡಿನಲ್ಲಿದ್ದ ಶ್ರೀಮತಿ ಫೆಲಿಕ್ಸ್‌ರ್ಯಡಾಲ್ಸ್‌ರಿಗೆ ಬರೆದು ತಿಳಿಸಿದರು. ಆಕೆ ಅದನ್ನು ಇಂಟರ್ ನ್ಯಾಷನಲ್ ಸೈಕಿಕ್ ಗೆಜೆಟ್‌ನಲ್ಲಿ ಪ್ರಕಟಿಸಿದಳು. ಕೆಲವು ಕಾಲಾನಂತರ ಇವರು ಕೆಲಸದಿಂದ ನಿವೃತ್ತರಾಗಿ ರೋಮನ್ ಕ್ಯಾಥೊಲಿಕ್ ಸಂನ್ಯಾಸಿಯಾದರು.

## ೨. ಹ್ಯಾರಿ ಡಿಕ್ಮನ್

ಇವರು ಬಾಲ್ಟಿಕ್‌ಸಮುದ್ರದ ನಡುಗಡ್ಡೆಯಲ್ಲಿರುವ. ಲಟ್ವಿಯಾದತುಕ್ಕುಂ ನಗರದ ನಿವಾಸಿಗಳು. ಯೋಗಾಭ್ಯಾಸದಲ್ಲಿ ಅತ್ಯಂತ ಆಸಕ್ತಿಯುಳ್ಳವರು. ಸಂಸ್ಕೃತ ಬಲ್ಲವರು. ಇದೂ ಅಲ್ಲದೆ 'ನಾನು ಯಾರು?' ಮತ್ತು 'ಉಪದೇಶ ಸಾರ' ಎಂಬ ಗ್ರಂಥಗಳನ್ನು 'ಲಟ್ವಿಷ್' ಭಾಷೆಯಲ್ಲಿ ಅನುವಾದಿಸಿ ಪ್ರಕಟಿದ್ದಾರೆ. ಅನೇಕ ಮಂದಿ ಶಿಷ್ಯರು ಇವರಿಂದ ಯೋಗ ಶಿಕ್ಷಣವನ್ನು ಹೊಂದುತ್ತಿದ್ದಾರೆ. ತಮ್ಮ ಆಶ್ರಮದಲ್ಲಿ ಪ್ರತಿವರ್ಷವೂ ರಮಣ ಜಯಂತಿಯನ್ನು ವಿಜೃಂಭಣೆಯಿಂದ ನೆರವೇರಿಸುತ್ತಿದ್ದಾರೆ.

## ೩. ಫೆಡ್ರಿಕ್ ಫ್ಲೆಚರ್

ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಪಧವೀಧರರು. ಕಳೆದ ಮಹಾಯುದ್ಧದಲ್ಲಿ ದಳಪತಿಯಾಗಿ ಸೈನ್ಯದಲ್ಲಿ ಕೆಲಸ ಮಾಡಿದರು. ಅಲ್ಲಿ ನಡೆಯುತ್ತಿದ್ದ ನರಮೇಧವನ್ನು ಕಂಡು ನೊಂದು ವೈರಾಗ್ಯವನ್ನು ತಾಳಿ ಬೌದ್ಧ ಸಂನ್ಯಾಸಿಯಾಗಿ ತಮ್ಮ ಹೆಸರನ್ನು 'ಭಿಕ್ಷು ಪ್ರಜ್ಞಾನಂದ' ಎಂಬುದಾಗಿ ಬದಲಾಯಿಸಿಕೊಂಡರು. ಇವರುರಂಗೂನಿನಲ್ಲಿ ಇಂಗ್ಲೀಷ್‌ಆಶ್ರಮವೊಂದನ್ನು ಸ್ಥಾಪಿಸಿದ್ದಾರೆ. ೧೯೩೭ರಲ್ಲಿ ಇವರು ರಮಣಾಶ್ರಮಕ್ಕೆ ಬಂದು ಮಹರ್ಷಿಗಳ ಉಪದೇಶವನ್ನು ಪಡೆದರು. ಅದನ್ನು ಅನೇಕ ಕಡೆ ಪ್ರಚಾರ ಮಾಡಿದರು.

## ೪. ಓಲ್ಗಾಪ್ರೋವೆ ಕೆಪ್‌ಕಿ

ಈಕೆ ಯೂರೋಪಿನ ಭೂಸ್ವರ್ಗವೆಂದು ಪರಿಗಣಿತವಾಗಿರುವ ಸ್ವಿಡ್ಜರ್ಲೆಂಡಿಗೆ ಸೇರಿದವಳು. ರಮಣ ಸಂದೇಶದ ಪ್ರಚಾರಕ್ಕಾಗಿ ಪಣತೊಟ್ಟು ಆಶ್ರಮವೊಂದನ್ನು ಸ್ಥಾಪಿಸಿದ್ದಾಳೆ. ಇದು ಸೃಷ್ಟಿ ಸೌಂದರ್ಯದ ನೆಲೆವೀಡಿನಲ್ಲಿದೆ. ಪ್ರತಿವರ್ಷವೂ ರಮಣ ಜಯಂತಿಯನ್ನು ವಿಜೃಂಭಣೆಯಿಂದ ನಡೆಯಿಸುತ್ತಾಳೆ.

## ೫. ಪಾಲ್ ಬ್ರಂಟನ್

ಸುಪ್ರಸಿದ್ಧ ಕವಿಯೂ, ಪತ್ರಿಕಾಕರ್ತನೂ ಆಗಿದ್ದ ಈತನ ಹೆಸರು ರಾಫೆಲ್ ಹರ್ಸ್ಟ್. ೧೯೩೪ರಲ್ಲಿ ಈತನಿಗೆ ಮಹರ್ಷಿಗಳ ದರ್ಶನಲಾಭ ದೊರೆಯಿತು. ಈತ ಕೆಲವುಕಾಲ ಆಶ್ರಮದಲ್ಲಿಯೇ ಇದ್ದು ರಮಣ ವಚನಾಮೃತದ ಸವಿಯನ್ನುಂಡನು. ಈತನಿಗೆ ಚಿಕ್ಕಂದಿನಿಂದಲೂ ಅಧ್ಯಾತ್ಮವಿದ್ಯೆಯಲ್ಲಿ ಆಸಕ್ತಿ ಇದ್ದಿತು. ಅದನ್ನು ಸಾಧಿಸಲೆಂದೇ ಅಧ್ಯಾತ್ಮ ವಿದ್ಯೆಯ ತವರೂರಾದ ಭಾರತಕ್ಕೆ ಬಂದನು. ಅನೇಕಕಡೆ ಸುತ್ತಿ ಕೊನೆಗೆ ರಮಣಾಶ್ರಮಕ್ಕೆ ಬಂದು ಶಿಷ್ಯವೃತ್ತಿ ಸ್ವೀಕರಿಸಿದನು. ಈತ 'ಅರುಣಾಚಲದ ಸಂದೇಶ' (Message of Arunachala) ಎಂಬ ಗ್ರಂಥವೊಂದನ್ನು ಬರೆದು ಪ್ರಕಟಿಸಿದ್ದಾನೆ.

* ರಮಣ ಮಹರ್ಷಿಗಳ ಲಕ್ಷೋಪಲಕ್ಷ ಭಕ್ತರಲ್ಲಿ ಮೇಲೆ ಕಂಡ ಹಲವರನ್ನು ಮಾತ್ರ ಇಲ್ಲಿ ಸ್ಮರಿಸಿದ್ದೇವೆ. ಕಣ್ಣಿಗೆ ಬೀಳದೆ ಎಲೆಮರೆಯ ಕಾಯಿಯಂತೆ ಅವರ ಭಕ್ತವೃಂದದಲ್ಲಿ ಇನ್ನೂ ಅದೆಷ್ಟು ಜನರಿದ್ದಾರೋ!



## ೧೧

## ಆಶ್ರಮ ಜೀವನ

'ಸಕಲವೂ ಸರ್ವ ಸಮ ಭೋಜ್ಯ' ಎಂಬ ತತ್ವವನ್ನು ಮಹರ್ಷಿಗಳು ತಮ್ಮ ಜೀವನದಲ್ಲಿ ಆಗಲೇ ಅನುಸಂಧಾನಕ್ಕೆ ತಂದಿದ್ದರು. ಭಕ್ತರು ಅರ್ಪಿಸಿದ ಸಕಲ ಭೋಜ್ಯ ವಸ್ತುಗಳನ್ನು ಅಲ್ಲಿ ನೆರದವರಿಗೆಲ್ಲ ಹಂಚಿ ಬಿಡುತ್ತಿದ್ದರು. ಮಹರ್ಷಿಗಳ ಸರ್ವ ಸಮತಾಭಾವವು ಎಲ್ಲರನ್ನೂ ಬಹಳಮಟ್ಟಿಗೆ ಆಕರ್ಷಿಸಿತ್ತು.

ಈ ಅವಧಿಯ ಮುನ್ನ ಮಹರ್ಷಿಗಳ ತಾಯಿ ತೀರ್ಥಯಾತ್ರಾದಿಗಳನ್ನೆಲ್ಲ ಮುಗಿಸಿದರು. ಈ ಹೊತ್ತಿಗಾಗಲೇ ಹಿರಿಯ ಮಗ ನಾಗಸ್ವಾಮಿ, ಸ್ವಲ್ಪ ಕಾಲಾನಂತರದಲ್ಲಿ ನೆಲ್ಲಿಯಪ್ಪಯ್ಯರ್ ನಿಧನ ಹೊಂದಿದ್ದರು. ತಿರುಚ್ಚುಳಿಯ ಮನೆಯನ್ನು ಮಾರಿಯಾಗಿತ್ತು. ಅಲಗಮ್ಮಾಳ್‌ರವರು ಕ್ಷೇತ್ರಯಾತ್ರೆಯಿಂದ ಹಿಂತಿರುಗಿದ ಕೆಲವು ದಿನಗಳಲ್ಲಿಯೇ (೧೯೧೫) ನಾಗಸುಂದರನ ಪತ್ನಿ ಎಳೆಯ ಮಗುವನ್ನು ಬಿಟ್ಟು ಭಗವಂತನ ಪಾದ ಸೇರಿದಳು. ಇವೆಲ್ಲ ಘಟನಾವಳಿಗಳು ಅಲಗಮ್ಮಾಳ್‌ರವರಲ್ಲಿ ವೈರಾಗ್ಯವನ್ನು ಮೂಡಿಸಿ, ಅವರನ್ನು ಅರುಣಾಚಲಕ್ಕೆ ಕರೆತಂದವು. ಅವರು ೧೯೧೬ರಲ್ಲಿ ಅಲ್ಲಿಗೆ ಬಂದವರು ಮತ್ತೆ ಹಿಂದಿರುಗಲಿಲ್ಲ.

ತಾಯಿ ಅಲಗಮ್ಮಾಳ್‌ರವರ ಅಪ್ಪಣೆಯ ಮೇರೆಗೆ ನಾಗಸುಂದರನೂ ಆಶ್ರಮವಾಸಕ್ಕಾಗಿ ಆಗಮಿಸಿದ. ೧೯೦೨ರ ಸುಮಾರಿಗೆ ಈತ ಮಹರ್ಷಿಗಳನ್ನು ಸದ್ಗುರುಸ್ವಾಮಿ ಗುಹೆಯಲ್ಲಿ ಕಂಡಾಗ ಅವರು ಆಗ ಆಶ್ರಮದಲ್ಲಿರಬೇಕೆಂದುವ್ಯಕ್ತಪಡಿಸಿದ ಅಭಿಪ್ರಾಯಕ್ಕೆ ಸಮ್ಮತಿಸಿರಲಿಲ್ಲ. ನಾಗಸುಂದರ ಅರುಣಾಚಲಕ್ಕೆ ಬಂದು ನೆಲೆನಿಂತ ಮೇಲೆ ಆಶ್ರಮಜೀವನ ಆವನಿಗೆ ಪೂರ್ಣವಾಗಿ ಒಗ್ಗಿ ಸಂನ್ಯಾಸವನ್ನು ಸ್ವೀಕರಿಸಿದನು. 'ನಿರಂಜನಾನಂದಸ್ವಾಮಿ'ಯೆಂದು ಆತನಿಗೆ ಹೆಸರಾಯಿತು.

ಮಹರ್ಷಿಗಳು ವಿರೂಪಾಕ್ಷ ಗುಹೆಯಿಂದ ಸ್ಕಂದಾಶ್ರಮಕ್ಕೆ ಬಂದರು. ಅಡಿಗೆಯ ಕೆಲಸ ಅಲಗಮ್ಮಾಳ್‌ರವರ ಪಾಲಿಗೆ ಬಂತು. ಅವರಿಗೆ ಮಹರ್ಷಿಗಳು ತಮ್ಮ ಪುತ್ರರೆಂಬ ಮೋಹ ಮತ್ತು ಅವರು ತಮ್ಮ ಮೇಲೆ ತಾಯಿಯೆಂಬ ಮಮಕಾರವನ್ನು ತೋರಬೇಕೆಂಬ ಆಸಕ್ತಿ ಜಾಗ್ರತವಾಗಿತ್ತು. ಇದನ್ನರಿತ ಮಹರ್ಷಿಗಳು ಅದನ್ನು ತಪ್ಪಿಸಲು ಯೋಚಿಸಿದರು. ಅವರು 'ಸಕಲ ಸ್ತ್ರೀವರ್ಗವೇ ನನ್ನ ಭಾಗಕ್ಕೆ ಮಾತೃಸ್ವರೂಪ; ಅಲಗಮ್ಮಾಳ್‌ರೊಬ್ಬರೇ ತಾಯಿಯಲ್ಲ' ಎಂದು, ಎಚ್ಚಮ್ಮಾಳ್ ಮೊದಲಾದವರೊಂದಿಗೆ ಮಾತನಾಡಿದರೂ ತಾಯಿಯೊಂದಿಗೆ ಮಾತನಾಡುವುದಿಲ್ಲವೆಂಬ ದೂರಿಗೆ ಉತ್ತರವೀಯುವಾಗ ತಿಳಿಸಿದರು.

ಅಲಗಮ್ಮಾಳ್‌ರವರಿಗೆ ಮಹರ್ಷಿಗಳ ವರ್ತನೆ ಒಂದು ದೊಡ್ಡ ಸಮಸ್ಯೆಯಾಗಿತ್ತು. ಮಹರ್ಷಿಗಳು ತಾಯಿಯ ಭೇದಭಾವವನ್ನು ಹೋಗಲಾಡಿಸಲು, ವೈರಾಗ್ಯ ಬಳೆಯುವಂತೆ ಮಾಡಲು ಬಹಳವಾಗಿ ಪ್ರಯತ್ನಿಸಬೇಕಾಯಿತು. ಅಲಗಮ್ಮಾಳ್‌ರವರಿಗೆ ಕಾಲಾನುಕ್ರಮದಲ್ಲಿ ಆಶ್ರಮಜೀವನದಲ್ಲಿ ಆತ್ಮೀಯತೆ ಹೆಚ್ಚಿತು. ಅವರ ಜೀವನದಲ್ಲಿ ಹೊಸ ಜ್ಯೋತಿಯೊಂದು ಬೆಳಗಿ ಅಜ್ಞಾನದ ಕತ್ತಲೆಯನ್ನು ಹೊಡೆದೋಡಿಸಿತು.

೧೯೨೨ರ ಮೇ ತಿಂಗಳಿನಲ್ಲಿ ಅಲಗಮ್ಮಾಳ್ ಹಾಸಿಗೆ ಹಿಡಿದರು. ಔಷಧೋಪಚಾರಗಳು ಯಥಾಪ್ರಕಾರ ಸಾಗಿದವು. ಮಹರ್ಷಿಗಳು ವ್ಯಾಧಿಗ್ರಸ್ತ ತಾಯಿಯ ಹಾಸಿಗೆಯ ಬಳಿಯಲ್ಲಿಯೇ ಕುಳಿತು ಆರೈಕೆ ಮಾಡಿದರು. ಬಂಧುಬಳಗದವರಿಗೆಲ್ಲ ತಂತಿ ಸಮಾಚಾರ ಮುಟ್ಟಿತು.

ಅಲಗಮ್ಮಾಳ್‌ರವರ ವ್ಯಾಧಿ ಉಲ್ಬಣಿಸಿ ೧೯೨೨ನೇ ಇಸವಿಯ ವೈಶಾಖ ಬಹುಳ ನವಮಿಯಂದು ರಾತ್ರಿ ೮ ಗಂಟೆಗೆ ಇಹಲೋಕ ವ್ಯಾಪಾರವನ್ನು ಅವರು ಮುಗಿಸಿದರು.

ತಾಯಿಯ ಮರಣ ಮಹರ್ಷಿಗಳಿಗೆ ಯಾವ ಮನೋವೇದನೆಯನ್ನೂ ತರಲಿಲ್ಲ. ಪಾಲಿತೀರ್ಥದ ಪಕ್ಕದಲ್ಲಿಯೇ ಇದ್ದ ಅಶ್ವತ್ಥವೃಕ್ಷದ ಅಡಿಯ

ಲ್ಲಿಯೇ ಸಮಾಧಿ ಮಾಡಲಾಯಿತು. ಈ ಸಮಾಧಿಯ ಪಕ್ಕದಲ್ಲಿಯೇ ಮಾತೃ ಭೂತೇಶ್ವರ ಎಂಬ ಹೆಸರಿನ ಲಿಂಗವೊಂದನ್ನು ಸ್ಥಾಪಿಸಿ ನಿತ್ಯಪೂಜೆಗೆ ಅಣಿ ಮಾಡಿದರು.

ಈ ಮಾತೃಭೂತೇಶ್ವರ ದೇವಸ್ಥಾನ ಮತ್ತು ಪಕ್ಕದ ಸಮಾಧಿಗಳು ರಮಣಾಶ್ರಮಕ್ಕೆ ಬರುವವರನ್ನೆಲ್ಲ ಆಕರ್ಷಿಸುತ್ತಿವೆ. ಈಗ ಅಲ್ಲಿ ಭವ್ಯವಾದ, ರಮಣೀಯವಾದ ಕಟ್ಟಡಗಳು ನಿರ್ಮಿತವಾಗಿವೆ. ಶ್ರೀ ರಮಣ ಮಹರ್ಷಿಗಳ ಮಾತೃಭಕ್ತಿಯು ಶ್ರೀ ಶಂಕರಾಚಾರ್ಯರ ಮಾತೃಭಕ್ತಿಯನ್ನೂ, ಛತ್ರಪತಿ ಶಿವಾಜಿಯ ಮಾತೃಭಕ್ತಿಯನ್ನೂ ನೆನಪಿಗೆ ತರುತ್ತದೆ.

ಭಕ್ತರ ಇಷ್ಟಾರ್ಥದಂತೆ ಮಹರ್ಷಿಗಳು ಬೆಟ್ಟದ ಮೇಲಿನ ಸ್ಕಂದಾಶ್ರಮವನ್ನು ಬಿಟ್ಟು ಮಾತೃಭೂತೇಶ್ವರನ ಪಕ್ಕದಲ್ಲಿಯೇ ಒಂದು ಆಶ್ರಮ ನಿರ್ಮಿಸಿ ಅಲ್ಲಿಯೇ ವಾಸಿಸಲಾರಂಭಿಸಿದರು. ಈ ಆಶ್ರಮ ಇಂದು ಭವ್ಯವಾಗಿ ಮೆರೆಯುತ್ತಿದೆ. ಇಲ್ಲಿ ಸಮಾಧಿ, ದೇವಾಲಯ, ಅತಿಥಿಶಾಲೆ, ಪಾಕಶಾಲೆ, ಭೋಜನಶಾಲೆ, ಗೋಶಾಲೆ, ಪರಿಚಾರಕ ಗೃಹ, ಮುಂಭಾಗದಲ್ಲಿ ಹಜಾರ ಮತ್ತು ಮಹರ್ಷಿಗಳಿಗಾಗಿ ವಿಶಾಲವಾದ ತೋಟ, ಕಂಗೊಳಿಸುತ್ತಿವೆ. ಪಕ್ಕದಲ್ಲಿರುವ ವಿಶಾಲ ಪ್ರದೇಶದಲ್ಲಿ ಹೂಗಿಡಗಳು, ಬಾಳೆ, ಮಾವು ಮೊದಲಾದ ವೃಕ್ಷಗಳು ಕಂಗೊಳಿಸುತ್ತಿವೆ ಸುತ್ತಲೆಲ್ಲ ಅನೇಕ ಪರ್ಣಶಾಲೆಗಳು ನಿರ್ಮಿಸಲ್ಪಟ್ಟಿವೆ. ಶಿಷ್ಯರೆಲ್ಲ ಇಲ್ಲಿ ವಾಸವಾಗಿದ್ದಾರೆ. ಆಶ್ರಮದಲ್ಲಿನ 'ದಾಸೋಹಕ್ಕೆ' ಎಂದೂ ಕೊರತೆಯಾಗಿಲ್ಲ. ದೀನ ದರಿದ್ರರನೇಕರು ಆಶ್ರಮದ ಪೋಷಣೆಗೊಳಗಾಗಿದ್ದಾರೆ. ಇದರಿಂದ ಆಶ್ರಮದಲ್ಲಿ ವಿಪರೀತ ಹಣ ಸಂಗ್ರಹವಿದೆಯೆಂಬ ಭಾವನೆ, ಅನೇಕ ಕಳ್ಳತನಗಳು ನಡೆಯಲು ಕಾರಣವಾಗಿದೆ. ೧೯೨೪ರಲ್ಲಿ ಕಳ್ಳತನಗಳ ಎರಡು ಘಟನೆಗಳು ನಡೆದವು. ಒಮ್ಮೆ ಸ್ವತಃ ಶ್ರೀ ಮಹರ್ಷಿಗಳಿಗೆ ಕಳ್ಳರು ಇಲ್ಲದ ತೊಂದರೆಕೊಟ್ಟರು.

ಪ್ರಾಣಿಗಳನ್ನು ಕಂಡರೆ ಮಹರ್ಷಿಗಳಿಗೆ ಪಂಚಪ್ರಾಣ. ಆಶ್ರಮದಲ್ಲಿನ 'ಲಕ್ಷ್ಮಿ' ಎಂಬ ಹಸು ಸಕಲರನ್ನು ಆಕರ್ಷಿಸಿತ್ತು. 'ಲಕ್ಷ್ಮಿ' ಮಹರ್ಷಿ

ಗಳಿಗೆ ಅತಿ ಆತ್ಮೀಯಳಾಗಿ ವರ್ತಿಸುತ್ತಿದ್ದಳು. ಅವರು ನಾಯಿಗಳನ್ನು, ಬೆಕ್ಕನ್ನೂ ಮಕ್ಕಳಂತೆ ಸಂಬೋಧಿಸುತ್ತಿದ್ದರೇ ವಿನಃ 'ಅದು', 'ಇದು' ಎಂದು ಎಂದೂ ನುಡಿಯುತ್ತಿರಲಿಲ್ಲ. ಮನುಷ್ಯರಿಗೂ, ಈ ಪಶುಗಳಿಗೂ ಯಾವ ಭೇದವನ್ನೂ ಎಣಿಸುತ್ತಿರಲಿಲ್ಲ. ಅವರು ಪ್ರಾಣಿಗಳನ್ನು ಸಂಬೋಧಿಸುತ್ತಿದ್ದ ರೀತಿ ಆಶ್ರಮಕ್ಕೆ ಬರುತ್ತಿದ್ದವರನ್ನೆಲ್ಲ ಆಶ್ಚರ್ಯ ಚಕಿತರನ್ನಾಗಿಸುತ್ತಿತ್ತು.

ಕೋತಿಗಳನ್ನು ಕಂಡರಂತೂ ಮಹರ್ಷಿಗಳಿಗೆ ಹೇಳತೀರದ ಆತ್ಮೀಯತೆ. ಮಹರ್ಷಿಗಳು ಆಶ್ರಮಕ್ಕೆ ಬಂದು ನೆಲೆನಿಲ್ಲುವುದಕ್ಕಿಂತ ಪೂರ್ವದ ತಿರುಗಾಟ ಕಾಲದಲ್ಲಿ ಕೋತಿಗಳೊಡನೆ ಸಹಚರಿಸಿ ಅವುಗಳ ಜೀವನ ವಿಧಾನವನ್ನು ಅರಿತಿದ್ದರು. ಅವರು ಚಿಕ್ಕ ಕೋತಿಮರಿಯೊಂದನ್ನು ಸಾಕಿ ಅದನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಅದು ಕಪಿಸ್ತೋಮಕ್ಕೆ 'ರಾಜ'ನಾಗಿ ಪರಿಗಣಿಸಲ್ಪಟ್ಟಿತಂತೆ. 'ನೊಂಡಿ' (ಮಹರ್ಷಿಗಳು ಸಾಕಿ ಪ್ರೀತಿಯಿಂದ ಕರೆಯುತ್ತಿದ್ದ ಕೋತಿ) ಕಪಿರಾಜನಾದ ಸಂತೋಷಾರ್ಥವಾಗಿ ಆಶ್ರಮದವರು ಒಂದು ಭೋಜನಕೂಟವನ್ನು ಇಡೀ ಕಪಿಕುಲಕ್ಕೆ ಏರ್ಪಡಿಸಿದ್ದರಂತೆ.

ನಾಯಿಗಳ ಬಗ್ಗೆ ಮಹರ್ಷಿಗಳಿಗೆ ವಿಶೇಷವಾದ ಮಮತೆ. ಅರುಣಾಚಲಕ್ಕೆ ಬಂದ ಕಾಲದಿಂದಲೂ ಅವು ಅವರ ಸಮೀಪವರ್ತಿಗಳಾದವು. ಮಹರ್ಷಿಗಳು ನಾಯಿಗಳಿಗೆ ಸೆಗಪ್ಪ, ಜಾಕ್, ಚಿನ್ನಕುರುಪ್ಪ, ಕರಿಯ, ಕಿಶೋರಿ, ಕಮಲಾ ಮೊದಲಾದ ಹೆಸರುಗಳನ್ನಿಟ್ಟಿದ್ದರು. ಆಶ್ರಮದ ನಾಯಿಗಳು ಬುದ್ಧಿ ಕುಶಲತೆಯಲ್ಲಿ ಅಗ್ರಗಣ್ಯವಾಗಿದ್ದವು. ಹೇಳಿದ ಮಾತನ್ನು ಚಾಚೂ ತಪ್ಪದೆ ನಡೆಸಿ ಕೊಡುತ್ತಿದ್ದವು. ತಮ್ಮತಮ್ಮಲ್ಲಿ ಅವೆಂದೂ ಕಚ್ಚಾಡಿದ್ದಿಲ್ಲ. 'ಜಾಕ್' ಎಂಬ ನಾಯಿಯಂತೂ ಆಶ್ರಮದಲ್ಲಲ್ಲದೆ ಬೇರೆಕಡೆ ಕೊಟ್ಟ ಯಾವ ಪದಾರ್ಥವನ್ನೂ ಮುಟ್ಟುತ್ತಿರಲಿಲ್ಲ. 'ಕಮಲ' ಎಂಬ ಹೆಣ್ಣುನಾಯಿ ತನ್ನ ಪೀಳಿಗೆಯನ್ನೇ ಆಶ್ರಮದಲ್ಲಿ ಬೆಳೆಸಿತ್ತು. ಈ ನಾಯಿ ಪ್ರಥಮ ಬಾರಿ ಮರಿ ಹಾಕಿದಾಗ ಮಹರ್ಷಿಗಳು ಅದಕ್ಕೆ ಸ್ನಾನಮಾಡಿಸಿ ಅರಿಶಿನ ಕುಂಕುಮ ವಿಟ್ಟು, ಗೊತ್ತಾದ ಸ್ಥಳಗಳಲ್ಲಿ ಮರಿಗಳೊಂದಿಗೆ ಇರುವಂತೆ ಏರ್ಪಾಟು ಮಾಡಿ

ದ್ದರಂತೆ. ೧೧ನೆಯ ದಿನ ಸಮಾರಾಧನೆಯನ್ನೇ ನಡೆಯಿಸಿದರಂತೆ. ಈ ನಾಯಿ ಕಾಲವಾದನಂತರ ಅದರ ಚರಮಕ್ರಿಯೆ ನಡೆಸಿ, ಅದಕ್ಕೊಂದು ಸಮಾಧಿಯನ್ನು ಏರ್ಪಡಿಸಿದರು.

ಇವುಗಳಲ್ಲದೆ ಭಗವಾನರು ಕಾಗೆಯನ್ನು ಪೋಷಿಸುತ್ತಿದ್ದರಂತೆ. ಇದಲ್ಲದೆ ಅಳಿಲುಗಳೂ ಮಹರ್ಷಿಗಳ ಕೃಪೆಗೆ ಪಾತ್ರವಾಗಿದ್ದವು. ಸರ್ಪಗಳೂ ಸಹ ಅವರ ಪ್ರೀತಿ ವಿಶ್ವಾಸ ಗಳಿಸಿದ್ದವು. ಮಹರ್ಷಿಗಳು ಸ್ಕಂದಾಶ್ರಮದಲ್ಲಿದ್ದಾಗ ಒಂದು ನಾಗರಹಾವು ಪ್ರತಿನಿತ್ಯವೂ ಅವರ ಬಳಿಗೆ ಬಂದು, ಹೆಡೆಯೆತ್ತಿ ಆಟವಾಡಿ ಅವರ ದರ್ಶನ ಪಡೆದು ಹಿಂತಿರುಗುವುದು ವಾಡಿಕೆಯಾಗಿತ್ತು. ಸರ್ಪವು ಈರೀತಿ ಬಂದು ಹೋಗುತ್ತಿದ್ದರೂ ಆಶ್ರಮದಲ್ಲಿನ ನವಿಲುಗಳಿಗೆ ಯಾವ ಹಾನಿಯೂ ಸಂಭವಿಸಿರಲಿಲ್ಲ. ಇಷ್ಟೇ ಅಲ್ಲ ಸರ್ಪ-ನವಿಲುಗಳು ತಮ್ಮ ಸಹಜ ವೈರವನ್ನು ತ್ಯಜಿಸಿ ಸ್ನೇಹವರ್ತಿಗಳಾಗಿದ್ದವು.

ಜ್ಞಾನಿಗಳಾದ ಪಂಡಿತರು, ಬ್ರಾಹ್ಮಣರು ಶ್ವಪಚರು, ಆನೆಗಳು, ಆಡುಗಳು, ನಾಯಿಗಳು, ಗೋವುಗಳು-ಹೀಗೆ ಎಲ್ಲ ಪ್ರಾಣಿಗಳನ್ನೂ ಸಮಾನವಾಗಿ ಕಾಣುವರೆಂದು ಗೀತೆಯಲ್ಲಿ ಹೇಳಿದೆ. ಯೋಗಶಕ್ತಿಯಿಂದ ತಪಸ್ವಿಗಳ ಸನ್ನಿಧಿಯಲ್ಲಿ ವಿಷಜಂತುಗಳೂಸಾಧುಗಳಾಗುವುವೆಂದು ಯೋಗಶಾಸ್ತ್ರದಲ್ಲಿ ಹೇಳಿದೆ. ಇದನ್ನೆಲ್ಲಾ ಮಹರ್ಷಿಗಳ ಆಶ್ರಮದಲ್ಲಿ ಭಕ್ತರು ಕಣ್ಣಾರನೋಡುವ ಭಾಗ್ಯ ಪಡೆದರು.

ಇದು ಮಹರ್ಷಿಗಳ ಜೀವದಯಾಪರತೆಯಾಯಿತು. ಇನ್ನು ಅವರು ಆಶ್ರಮದಲ್ಲಿ ಪ್ರತಿನಿತ್ಯ ನಡೆಯಿಸುತ್ತಿದ್ದ ಕಾರ್ಯಕ್ರಮದ ಬಗ್ಗೆ ಈ ಕೆಳಗೆ ಕೆಲವು ಅಂಶಗಳನ್ನು ಕೊಡಲಾಗಿದೆ.

ಆಶ್ರಮದ ವೈಭವವನ್ನು ಕಾರ್ತಿಕೈಹಬ್ಬ, ಮಹರ್ಷಿಗಳ ಜಯಂತ್ಯುತ್ಸವ, ಮಾತೃಭೂತೇಶ್ವರ ಆರಾಧನೆಗಳ ಕಾಲದಲ್ಲಿ ನೋಡಬೇಕು. ಸಹಸ್ರಾರು ಜನಕ್ಕೆ ಅನ್ನಸಂತರ್ಪಣೆಯಾಗುತ್ತದೆ. ಜೊತೆಗೆ ಜ್ಞಾನೋಪದೇಶವೂ ಆವಿ

ರತವಾಗಿ ಸಾಗುತ್ತದೆ. ಈ ಎಲ್ಲ ಮಂಗಳ ಸಮಯದಲ್ಲಿ ಮಹರ್ಷಿಗಳನ್ನು ಪುಷ್ಪಾಲಂಕೃತ ವೇದಿಕೆಯ ಮೇಲೆ ಕೂರಿಸಿ, ಅವರ ಚರಣ ಸನ್ನಿಧಿಯಲ್ಲಿ ಶಿಷ್ಯಕೋಟಿ ಅನನ್ಯವಾದ ಭಕ್ತಿಯನ್ನು ಅರ್ಪಿಸಿ ಪುನೀತವಾಗುವುದು.

ಉತ್ಸವಾದಿಗಳಿಲ್ಲದ ಸಾಮಾನ್ಯ ದಿನಗಳಲ್ಲಿ ಮಹರ್ಷಿಗಳು ಹಜಾರದಲ್ಲಿ ಶತಪಥ ತಿರುಗುತ್ತಲೋ, ಯಾವುದಾದರೂ ಗ್ರಂಥಾವಲೋಕನ ಮಾಡುತ್ತಲೋ, ಧ್ಯಾನಾಸಕ್ತರಾಗಿಯೋ ವೇಳೆಕಳೆಯುವರು. ದರ್ಶನಾಪೇಕ್ಷೆಯಿಂದ ಹೋದವರು ದರ್ಶನಕ್ಕಾಗಿ ಶ್ರಮಿಸಬೇಕಾಗಿರಲಿಲ್ಲ. ಇತ್ತೀಚೆಗೆ ನಾನಾ ವರಗಳನ್ನು ಪಡೆಯಲು, ಮಹರ್ಷಿಗಳ ಅನುಗ್ರಹಕ್ಕೆ ಪಾತ್ರರಾಗಲು ಬರುತ್ತಿದ್ದ. ಭಕ್ತವೃಂದ ಮೇರೆ ಮೀರಿತ್ತು. ಅವರೆಲ್ಲರಿಗೂ ಸಮಾಧಾನವು ದೊರೆಯುತ್ತಿತ್ತು.

ಪ್ರತಿನಿತ್ಯ ಮಹರ್ಷಿಗಳು ನಸುಕಿನ ೪ ಗಂಟೆಗೆ ಏಳುತ್ತಿದ್ದರು. ಅದರೊಂದಿಗೆ ಆಶ್ರಮದ ಕಾರ್ಯಕಲಾಪಗಳು ಪ್ರಾರಂಭವಾಗುತ್ತಿದ್ದವು.

ಆಶ್ರಮದಲ್ಲಿ ಪ್ರತಿ ಕಾರ್ಯಕ್ರಮಗಳೂ ಸಮಯಕ್ಕೆ ಸರಿಯಾಗಿ ನಡೆದ ಬಿಡುವುವು. ಕೊಂಚವೂ ತಪ್ಪುವಹಾಗಿಲ್ಲ. ಪಾಶ್ಚಾತ್ಯರು ಹೇಳುವ 'ಕ್ರಮಾಚರಣೆ' (Punctuality) ಆಶ್ರಮದಲ್ಲಿ ಯಥಾಪ್ರಕಾರ ಸಾಗುತ್ತಿತ್ತು.

ಆಶ್ರಮವನ್ನು ದಿನಕ್ಕೆ ಅನೇಕ ಬಾರಿ ಗುಡಿಸಲಾಗುವುದು. ಅದು ಸರ್ವಕಾಲದಲ್ಲೂ ಚೊಕ್ಕಟವಾಗಿರಬೇಕು. ಪುಸ್ತಕಗಳು ಯಾವ ಸ್ಥಳದಲ್ಲಿರಬೇಕೋ ಅವು ಎಲ್ಲ ಕಾಲಕ್ಕೂ ಅಲ್ಲಿಯೇ ಇರತಕ್ಕದ್ದು. ಬಟ್ಟೆಗಳಂತೂ ಹಾಲಿನಂತೆ ಶುಭ್ರವಾಗಿರುವುವು. ಜೊತೆಗೆ ಅವುಗಳನ್ನು ಮಡಿಚಿ ಇಡುವ ವಿಧಾನವಂತೂ ಅತಿ ಆಕರ್ಷಕ. ಮಹರ್ಷಿಗಳು ಧರಿಸುವುದು ಬರಿ ಕಂತೆ ಆದಂತೂ ಹಿಂಜಿದ ಹತ್ತಿಯಂತೆ ಶುಭ್ರವಾಗಿರುವುದು.

ಆಶ್ರಮದ 'ಹಾಲ್'ನಲ್ಲಿ ಎರಡು ಗೋಡೆ ಗಡಿಯಾರಗಳಿವೆ. ಅವುಗಳನ್ನು ಪ್ರತಿದಿನ ರೇಡಿಯೋ ಸಮಯಕ್ಕೆ ಸರಿಯಾಗಿ 'ಕಾಲ'ವನ್ನು ಏನಾ

ದರೂ ವ್ಯತ್ಯಾಸವಿದ್ದರೆ ಸರಿಪಡಿಸಲಾಗುವುದು. ಗೋಡೆಯ ಮೇಲೆ ತಂಗೊ ಳಿಸುವ ಕ್ಯಾಲಂಡರು ತಪ್ಪದೆ ನಿತ್ಯದ ತಾರೀಖು ತೋರಿಸುವ ವ್ಯವಸ್ಥೆ ಇದೆ. ಎಲ್ಲ ಯಂತ್ರದಂತೆ ಓಡುತ್ತವೆ.

ಮಹರ್ಷಿಗಳ ಕಣ್ಣು ಪ್ರತಿ ಸಣ್ಣ ಕೆಲಸದ ಮೇಲೆ ಸಹ ಬೀಳದೇ ಇರು ವುದಿಲ್ಲ. ಇದನ್ನರಿತ ಆಶ್ರಮವಾಸಿಗಳು ತಾವೇ ಪ್ರತಿಯೊಂದನ್ನೂ ಯಥಾ ಸಾಂಗವಾಗಿ ನೆರವೇರಿಸುತ್ತಾರೆ.

ಭಗವಾನರ ನಿತ್ಯ ಕಾರ್ಯಕ್ರಮದ ಸ್ಥೂಲ ದಿಗ್ದರ್ಶನವನ್ನೀರೀತಿ ಮಾಡಬಹುದು.

ನಸುಕಿನ ಐದು ಗಂಟೆಗೆ ಭಗವಾನರು ಶಯನಮಾಡುತ್ತಿದ್ದ ನಡುಮನೆ ಬಾಗಲು ತೆರೆಯುವುದು. ಭಕ್ತರು ನಿಧಾನವಾಗಿ ಶಬ್ದಮಾಡದಂತೆ ಒಳಕ್ಕೆ ಪ್ರವೇಶಿಸಿ ಕುಳಿತುಕೊಳ್ಳುವರು. ಧ್ಯಾನಾಸಕ್ತರಾಗುವರು. ವೇದಮಂತ್ರ ಗಳನ್ನು ಉಚ್ಚರಿಸಲಾಗುವುದು. ಆರು ಗಂಟೆಗೆ ಮಹರ್ಷಿಗಳು ಸ್ನಾನಗೃಹಕ್ಕೆ ತೆರಳುವರು. ಏಳು ಗಂಟೆಗೆ ಆಶ್ರಮದ ಭೋಜನಾಲಯದಲ್ಲಿ 'ನ್ಯಾಹರಿ'* ನಡೆಯುವುದು. ಮತ್ತೆ ಭಕ್ತರು ಭಗವಾನರ ಮುಂದೆ ೧೦ ಗಂಟೆಯವರೆಗೆ ಕುಳಿತಿರುವರು. ಈ ಅವಧಿಯಲ್ಲಿ ಅರ್ಧ ಗಂಟೆ ಮಾತ್ರ ವಿಶ್ರಾಂತಿ ಕೊಡ ಲ್ಪಡುವುದು.

ಮಹರ್ಷಿಗಳ ಎದುರಿನಲ್ಲಿ ಭಕ್ತರು ಕುಳಿತಾಗ ಮಾತುಗಳು ಕೇಳಿಬರು ವುದಿಲ್ಲ. ಚಿರಮೌನ. ಮಹರ್ಷಿಗಳ ಪ್ರೇಮಾಶೀರ್ವಾದಗಳು ಅವರ ನೋಟದ ಮೂಲಕ ಭಕ್ತವೃಂದವನ್ನು ತನ್ಮಯಗೊಳಿಸುವವು.

ಮಹರ್ಷಿಗಳು ತದೇಕಚಿತ್ತರಾಗಿರುವರು.

ಮತ್ತೆ ಕೆಲವು ಸಲ ಭಕ್ತರು ಭಗವಾನರ ನಾಮಾಮೃತವನ್ನು ಸುಶ್ರಾ ವ್ಯವಾಗಿ ಹಾಡುವರು. ಇನ್ನೂ ಕೆಲವು ಬಾರಿ ಹಲವರು ಪ್ರಶ್ನೆಗಳನ್ನು ಕೇಳುವರು.

---

*'break-fast'

೯-೧೦ ಗಂಟೆಯ ಅವಧಿಯಲ್ಲಿ ಅಂಚೆ ಬರುವುದು. ಮಹರ್ಷಿಗಳು ಬಂದ ಕಾಗದಗಳನ್ನು ನೋಡುವರು. ಪತ್ರಿಕೆಗಳನ್ನು ಓದುವರು. ಆದರೆ ಈ ಸಮಯದಲ್ಲಿಸಹ ಶಾಂತಿಗೆ ಎಳ್ಳಷ್ಟೂ ಭಂಗ ಬಾರದು.

ಯಾವ ಕಾಗದಕ್ಕೂ ಮಹರ್ಷಿಗಳು ಸ್ವತಃ ಉತ್ತರ ಬರೆಯುತ್ತಿರಲಿಲ್ಲ. ಅವುಗಳನ್ನು ಆಶ್ರಮದ ಕಛೇರಿಗೆ ಒಪ್ಪಿಸಿಬಿಡುತ್ತಿದ್ದರು. ಕಾಗದಗಳಿಗೆ ಬರೆದ ಉತ್ತರಗಳನ್ನು ಸಾಯಂಕಾಲ ಮಹರ್ಷಿಗಳಿಗೆ ತೋರಿಸಲಾಗುತ್ತಿತ್ತು.

ಮಹರ್ಷಿಗಳು ಮಕ್ಕಳಂತೆ ನಗುತ್ತಿದ್ದರು. ತಮ್ಮ ಬಳಿ ಇದ್ದವರೆಲ್ಲರೊಂದಿಗೆ ಮಾತನಾಡುತ್ತ ಧಾರಾಳವಾಗಿ ನಗುತ್ತಿದ್ದರು. ಎಲ್ಲರನ್ನು ನಗಿಸುವರು. ಕೆಲವು ಬಾರಿ ನಗೆ ಮಾತುಗಳನ್ನಾಡುವರು. ಅವೂ ಸಹ ಭಕ್ತರಿಗೆ ಸಲಹೆ ಯೋಪಾದಿಯಲ್ಲಿರುತ್ತಿದ್ದುವು.

ಮಹಾ ನಿರ್ವಾಣ ಸಮೀಪಿಸುತ್ತಿದ್ದಾಗ ವೈದ್ಯರು ಗಾಬರಿಗೊಂಡ ಸಮಯ. ಆಗ ಮಹರ್ಷಿಗಳು ಪ್ರಶಾಂತ ಚಿತ್ತರಾಗಿಯೇ ಇದ್ದು "ಏತಕ್ಕೆ ಇಷ್ಟು ಚಿಂತಿಸುತ್ತೀರಿ? ಸೃಷ್ಟಿ ಧರ್ಮ. ಅದು ಸಮೀಪಿಸುತ್ತಿದೆ" ಎಂದರು.

ಒಮ್ಮೆ ಓರ್ವ ಮಹಿಳೆ ಮಹರ್ಷಿಗಳ ಕೋಣೆಯ ಹೊರಗಡೆ ತನ್ನ ತಲೆಯನ್ನು ಗೋಡೆಗೆ ಗಟ್ಟಿಸುತ್ತಿದ್ದಳು. ಮಹರ್ಷಿಗಳು ಇದರ ಶಬ್ದ ಕೇಳಿದರು. ಆ ಮಹಿಳೆಯ ದುಃಖವನ್ನರಿತರು. ಆದರೆ ಆ ದುಃಖ ತಲೆಯನ್ನು ಗೋಡೆಗೆ ಹೊಡೆಯುವುದರ ಮೂಲಕ ಹೇಗೆ ಶಮನವಾದೀತು ಎಂದು ಚಿಂತಿಸಿ 'ನಾನು ಯಾರೋ ತೆಂಗಿನಕಾಯಿ ಒಡೆಯುತ್ತಿದ್ದಾರೆಂದು ತಿಳಿದಿದ್ದೆ' ಎಂದು ನುಡಿದುಬಿಟ್ಟರು.

೧೧ ಗಂಟೆಗೆ ಊಟ. ಇತ್ತೀಚಿನ ಕೆಲವು ವರ್ಷಗಳಲ್ಲಂತೂ ಭಗವಾನರು ಭೋಜನವಾದನಂತರ ಸ್ವಲ್ಪಕಾಲ ವಿಶ್ರಾಂತಿ ಪಡೆಯುತ್ತಿದ್ದರು. ಆಗ ನಡುಮನೆ ಬಾಗಿಲು ಹಾಕಲ್ಪಡುವುದು. ಭಕ್ತರು ಆಗ ಸಂದರ್ಶಿಸುವಂತಿಲ್ಲ.

ಮಧ್ಯಾಹ್ನ ೩ ರಿಂದ ೫ ಘಂಟೆವರೆಗೆ ಭಕ್ತವೃಂದ ಮಹರ್ಷಿಗಳನ್ನು ಸುತ್ತುವರಿಯುವುದು. ಆಗ ಮಹರ್ಷಿಗಳು ಬೆಟ್ಟದ ಮೇಲೆ ಅರ್ಧಗಂಟೆ ಕಾಲ ಗಾಳಿ ಸವಾರಿ ಮಾಡುವರು.

ಮಹಾ ನಿರ್ವಾಣಕ್ಕೆ ಕೊಂಚ ಹಿಂದೆ ಮಹರ್ಷಿಗಳ ಕಾಲುಗಳು ರುಮ್ಯಾಟಿಸಂ ಬೇನೆಯಿಂದ ಬಾತಿದ್ದವು. ಆಗ ಆಶ್ರಮದ ಪ್ರದೇಶದಲ್ಲಿ ನಿಧಾನವಾಗಿ ನಡೆಯುವುದಕ್ಕೂ ಸಹ ಅವರಿಗೆ ಕಷ್ಟವಾಗುತ್ತಿತ್ತು.

ಸಂಜೆ ೫-೩೦ಕ್ಕೆ ಮತ್ತೆ ವೇದ ಮಂತ್ರಗಳ ಪಠನಕ್ಕೆ ಪ್ರಾರಂಭವಾಗುವುದು. ೬-೩೦ಕ್ಕೆ ಮಹಿಳೆಯರು 'ಹಾಲ್'ನಿಂದ ಹೊರ ಹೊರಡುವರು. ಅರ್ಧ ಗಂಟೆಯ ನಂತರ ಉಳಿದ ಭಕ್ತರು ಹೊರಕ್ಕೆ ತೆರಳುವರು.

ಇದು ನಿತ್ಯದ ದಿನಚರಿ

ಇನ್ನು ಅತಿ ಚಿಕ್ಕ ಪುಟ್ಟ ವಿಚಾರಗಳಲ್ಲಿ ಮಹರ್ಷಿಗಳು ಬಹಳ ಆಸಕ್ತಿ ತೋರುತ್ತಿದ್ದರು. ವ್ಯರ್ಥವಾಗಿ ಒಂದು ಚೂರು ಕಾಗದವನ್ನು ಸಹ ಹರಿದು ಹಾಕುವಂತಿಲ್ಲ. ಹೊಸ ಪುಸ್ತಕಗಳಿಗೆ ಸೊಗಸಾದ ರೀತಿಯಲ್ಲಿ 'ಬೈಂಡಿಂಗ್' ನಡೆಯಬೇಕು. ಎಲ್ಲದರಲ್ಲಿ ಶಾಸ್ತ್ರವನ್ನೂ ಸೌಂದರ್ಯವನ್ನೂ ಮಹರ್ಷಿಗಳು ಅಪೇಕ್ಷಿಸುತ್ತಿದ್ದರು.

ಆಹಾರ ಪದಾರ್ಥಗಳ ವಿಷಯದಲ್ಲಂತೂ ಮಹರ್ಷಿಗಳು ಅಪಾರವಾದ ಗಮನವೀಯುತ್ತಿದ್ದರು. ಒಂದು ಎಳ್ಳಷ್ಟು ಧಾನ್ಯವೂ ವ್ಯರ್ಥವಾಗುತ್ತಿರಲಿಲ್ಲ.

ಆಶ್ರಮಕ್ಕೆ ಬಂದ ಭಕ್ತರು ಇತ್ತ ಫಲಪುಷ್ಪಾದಿಗಳ ವಿನಿಯೋಗವಂತೂ ಮಹರ್ಷಿಗಳ ನೇತೃತ್ವದಲ್ಲೇ ಆಗಬೇಕು. ಹಣ್ಣುಗಳನ್ನು ಮುಖ್ಯವಾಗಿ ಮಕ್ಕಳಿಗೂ ಕೋತಿಗಳಿಗೂ ಹಂಚಬೇಕೆಂಬುದು ಮಹರ್ಷಿಗಳ ಸಲಹೆ.

ಮಹರ್ಷಿಗಳು ಪ್ರತಿನಿತ್ಯ ಬಾಳೆ ಎಲೆಯ ಮೇಲೆ ಊಟಮಾಡುತ್ತಿದ್ದರು ಅವರು ಭೋಜನ ಮುಗಿಸಿದಾಗ ಆ ಎಲೆಯನ್ನು ನೋಡಿದರೆ ಅದನ್ನು ಈಗ ತಾನೆ ಜಲದಿಂದ ನಿರ್ಮಲವಾಗಿ ತೊಳೆದಿದ್ದಾರೋ ಎನ್ನುವಂತೆ ಕಾಣುತ್ತಿತ್ತು.

ಮಹರ್ಷಿಗಳು ಆರೋಗ್ಯಭಾಗ್ಯದಿಂದ ಇದ್ದು ಶಕ್ತಿವಂತರಾಗಿದ್ದಾಗ ಪಾಕಶಾಲೆಗೆ ಬಂದು ಅಡಿಗೆ ಮಾಡುವವರಿಗೆ ಸ್ವತಃ ನೆರವಾಗುತ್ತಿದ್ದರು. ತರಕಾರಿಯ ಸೊಪ್ಪುಸದೆ ಮತ್ತು ಇತರ ವಸ್ತುಗಳನ್ನು ದನ-ಕರುಗಳಿಗೆ ಹಾಕಬೇಕೆಂದೂ ಅದನ್ನು ವ್ಯರ್ಥಗೊಳಿಸಬಾರದೆಂದೂ ಹೇಳುತ್ತಿದ್ದರು.

ಮಹರ್ಷಿಗಳು ಒಂದು ದೃಷ್ಟಿಯಿಂದ ಸಾರ್ವಭೌಮನಂತೆ ಇದ್ದರು. ಅವರ ಮಾತು ಯಾವ ಅಡೆತಡೆಯೂ ಇಲ್ಲದೆ ನಡೆದು ಹೋಗುತ್ತಿತ್ತು. ಅವರ

ಆಜ್ಞೆಯನ್ನು ಪಾಲಿಸುವುದೇ ಪರಮ ಭಾಗ್ಯವೆಂದರಿತ ಭಕ್ತಕೋಟಿ ಸರ್ವದಾ ಸಿದ್ಧವಾಗಿರುತ್ತಿತ್ತು. ಇಷ್ಟಾದರೂ ಮಹರ್ಷಿಗಳು ವಿಮುಕ್ತರು.

ಮಹರ್ಷಿಗಳು ಎಂದೂ 'ಇದು 'ನನ್ನದು' ಎಂದು ಯಾವುದಕ್ಕೂ ಹೇಳಲಿಲ್ಲ. 'ಇಂಥದು ಕೊಡಿ' ಎಂದು ಯಾರನ್ನೂ ಕೇಳಲಿಲ್ಲ. ತಮಗೆ ತೀರ ಅಗತ್ಯವಾದ ಬಟ್ಟೆ ಮತ್ತು ಸಾದಾ ಆಹಾರವನ್ನು ಮಾತ್ರ ಅವರ ಸ್ವೀಕರಿಸುತ್ತಿದ್ದರು. ಇದರ ಹೊರತಾಗಿ ಅವರು ಭಕ್ತರು ಕೊಟ್ಟ ಹೂ ಹಣ್ಣುಗಳನ್ನು ಸ್ವೀಕರಿಸಿದರೂ ಅವೆಲ್ಲವನ್ನು ಸಕಲರಿಗೂ ಹಂಚುತ್ತಿದ್ದರು.

ಭಗವಾನರು ತಮಗೆ ವಿಶೇಷ ರೀತಿಯ ಆದರ ತೋರಿಸಬೇಕೆಂದು ಎಂದೂ ಬಯಸಲಿಲ್ಲ. ಹಾಗೆ ಯಾರಾದರೂ ತೋರಿಸಲು ಬಂದರೆ ಅದನ್ನವರು ಪ್ರತಿಭಟಿಸುತ್ತಿದ್ದರು.

ಪ್ರಾರ್ಥನಾಭವನದಲ್ಲಿ ಭಕ್ತರು ಕುಳಿತಿದ್ದಾಗ ಭಗವಾನರು ಪ್ರವೇಶಿಸಿದಾಗ ಭಕ್ತರು ಎದ್ದು ನಿಲ್ಲಲು ಯತ್ನಿಸುವರು. ಆಗ ಭಗವಾನರು ತಕ್ಷಣವೇ "ಏಳ ಬೇಡಿ. ಹಾಗೇ ಕುಳಿತಿರಿ" ಎಂದು ಸೂಚಿಸುವರು.

ಬಿಸಿಲು ಕಾಲದಲ್ಲಿ ಮಹರ್ಷಿಗಳು ಕುಳಿತುಕೊಳ್ಳುವ ಸ್ಥಳದಲ್ಲಿ ವಿದ್ಯುಚ್ಛಕ್ತಿಯಬೀಸಣಿಗೆ ತಿರುಗುವಂತೆ ಮಾಡಲೆತ್ನಿಸಿದಾಗ 'ಬೇಡ ಎಲ್ಲ ಭಕ್ತರಿಗೂ ಅದು ಗಾಳಿ ಬೀಸಲಾರದು' ಎಂದು ಹೇಳುತ್ತಿದ್ದರು. ಅನಂತರದಲ್ಲಿ ಹಾಲ್‌ನ ಕೆಲವು ಕಡೆಗೆ ವಿದ್ಯುಚ್ಛಕ್ತಿಯ ಬೀಸಣಿಗೆ ಇರುವಂತೆ ವ್ಯವಸ್ಥೆ ಮಾಡಲಾಯಿತು.

ಒಂದು ಬಾರಿ ಮಾವಿನ ಹಣ್ಣನ್ನು ಹೆಚ್ಚಿ ತುಣು ಕುಮಾಡಿ ಎಲ್ಲರಿಗೂ ಹಂಚಲಾಗುತ್ತಿತ್ತು. ಭಕ್ತ ಎಲ್ಲರಿಗೂ ಸಣ್ಣ ಹೋಳು ಕೊಟ್ಟು ಮಹರ್ಷಿಗಳಿಗೆ ಅರ್ಧ ತುಣಕು ಕೊಟ್ಟ. ಅವರು ಕೋಪಗೊಂಡು ನನಗೂ ಅಷ್ಟೇ ಕೊಡು ಎಂದರು.

ಇಂಥ ಸಣ್ಣಪುಟ್ಟ ಅಂಶಗಳಲ್ಲಿ ಮಹರ್ಷಿಗಳು ತೋರುತ್ತಿದ್ದ ಕೋಪ ಕಡಿಮೆಯಾದರೂ ಕರ್ತವ್ಯಚ್ಯುತಿಯಾದಾಗ ಮಾತ್ರ ಅವರ ಕೋಪ ಎಲ್ಲೆ

ಮಿೀರುತ್ತಿತ್ತು. ಅವರು ಯಾರಿಗೂ ಆಶ್ರಮಬಿಟ್ಟು ಹೋಗಿ ಎಂದೂ ಹೇಳು ತ್ತಿರಲಿಲ್ಲ; ಯಾರಿಗೂ ಬಲವಂತ ಮಾಡಿ ಇರಿ ಎಂದೂ ಹೇಳುತ್ತಿರಲಿಲ್ಲ. ಆದರೆ ಎಲ್ಲರ ಮೇಲೂ ಅವರ ಸೂಕ್ಷ್ಮದೃಷ್ಟಿ ಬೀಳದೆ ಇರುತ್ತಿರಲಿಲ್ಲ. ತಾಯಿ ತನ್ನ ಮಗುವನ್ನು ನೋಡಿದಂತೆ ಮಹರ್ಷಿಗಳು ಭಕ್ತರನ್ನು ನೋಡಿಕೊಳ್ಳು ತ್ತಿದ್ದರು.

"ಭಗವಾನರು ಇಂದು ಯಾವ ರೀತಿಯ ಮಾನಸಿಕ ಸ್ಥಿತಿಯಲ್ಲಿದ್ದಾರೆ?" ಎಂದು ಕೇಳುವ ಪ್ರಮೇಯವೇ ಇಲ್ಲ. ಅವರಿಗೆ ಮಾನಸಿಕ ಸ್ಥಿತಿ ಎಂಬುದೇ ಇರಲಿಲ್ಲ. ಎಲ್ಲ ಕಾಲಕ್ಕೂ ಒಂದೇ ಸ್ಥಿತಿ.

ಹೊರಗಿನಿಂದ ಆಶ್ರಮಕ್ಕೆ ಯಾರೇ ಬರಲಿ ಸ್ವಲ್ಪ ಹೊತ್ತಿನಲ್ಲಿಯೇ ಅವರಿಗೆ ಅಲ್ಲಿನ ವಾತಾವರಣ ಆತ್ಮೀಯತೆಯನ್ನು ಉಕ್ಕಿಸುತ್ತಿತ್ತು. ಮಹರ್ಷಿ ಗಳು ಮಾತನಾಡದಿದ್ದರೂ ಅನಿರ್ವಚನೀಯವಾದ ಪ್ರೀತಿಯನ್ನು ಅವರು ತೋರಿದಂತೆ ಸಕಲರಿಗೂ ಭಾಸವಾಗುತ್ತಿತ್ತು.

ಮಹರ್ಷಿಗಳು ಸಾಮಾನ್ಯವಾಗಿ ಎಲ್ಲರನ್ನೂ "ನಿಮ್ಮ ಊಟ ವಾಯಿತೇ?" ಎಂದು ವಿಚಾರಿಸುತ್ತಿದ್ದರು. ಇನ್ನು ಭಕ್ತರ ಬಗ್ಗೆ ಸಕಲ ಅಂಶಗಳನ್ನೂ ತಿಳಿದುಕೊಳ್ಳುತ್ತಿದ್ದರು. ಅವರಿಗೆ ಸೂಕ್ತ ಮಾರ್ಗದರ್ಶನವಾ ಡುತ್ತಲಿದ್ದರು. ಕೆಲವು ಬಾರಿ, ಕೆಲವರನ್ನು ಪ್ರತಿದಿನ ನೋಡಿ ಮುಗುಳ್ನಗೆ ನಕ್ಕು ತಮ್ಮ ಪ್ರೀತಿಯನ್ನು ತೋರಿದರೆ ಇನ್ನೂ ಕೆಲವು ಸಲ ತಿಂಗಳುಗಟ್ಟಲೆ ಯಾದರೂ ನೋಡುತ್ತಿರಲೇ ಇಲ್ಲ. ಭಕ್ತರಲ್ಲಿನ 'ಅಹಂ' ಹೋಗಿದೆಯೋ ಇಲ್ಲವೋ ಎಂಬುದನ್ನವರು ಬಲವಾಗಿ ಪರೀಕ್ಷಿಸುತ್ತಿದ್ದರು. ಅದು ಕಠೋರ ಪರೀಕ್ಷೆಯೆಂದೇ ಹೇಳಬೇಕು.

ಆಶ್ರಮದಲ್ಲಿ ಹೊರಗಿನಿಂದ ಬಂದವರಿಗೆ ಊಟಕ್ಕೇರ್ಪಾಟಾಗುವುದು. ಉಳಿದ ಸಾಧುಗಳೇ ಮೊದಲಾದವರು ತಮ್ಮ ತಮ್ಮ ಕುಟೀರಗಳಲ್ಲಿ ಅಡಿಗೆ ಮಾಡಿಕೊಳ್ಳುವರು. ಇತರ ಭಕ್ತರು ತಮ್ಮ ಸೇವಾಕಾರ್ಯ ಮುಗಿಸಿ ತಮ್ಮ ತಮ್ಮ ಮನೆಗೆ ತೆರಳುವುದು ವಾಡಿಕೆ.

ರಮಣ ಮಹರ್ಷಿಗಳು ಸರ್ವರಿಗೂ ಕರ್ಮಮಾರ್ಗವನ್ನು ಬೋಧಿಸುತ್ತಿದ್ದರು.

ಮಹರ್ಷಿಗಳು ನೇರವಾಗಿ 'ಹೀಗೆ ಮಾಡು' ಎಂದು ಯಾರಿಗೂ ಹೇಳುತ್ತಿರಲಿಲ್ಲ. ಯಾರಾದರೂ ಬಲವಂತ ಮಾಡಿ ಕೇಳಿದಾಗ 'ನಿನಗೆ ಅದನ್ನು ಮಾಡಬೇಕು ಎನಿಸಿದರೆ ಮಾಡು' ಎಂದಿಷ್ಟೇ ಉತ್ತರವೀಯುವರು.

ಒಮ್ಮೆ ಓರ್ವ ಭಕ್ತ ತಿರುವಣ್ಣಾಮಲೆಯನ್ನು ತ್ಯಜಿಸಿ ಸಂಬಳದ ಕೆಲಸ ಹಿಡಿಯಬೇಕೆಂದು ಯೋಚಿಸಿದ. ಭಗವಾನರು ಇದನ್ನು ತಿಳಿದು "ಯೋಜನೆ ಮಾಡಲು ಸರ್ವರೂ ಸ್ವತಂತ್ರರು" ಎಂದುತ್ತರವಿತ್ತರು. ಹಾಗೆಯೇ ಮುಗುಳ್ನಗೆ ನಕ್ಕುಬಿಟ್ಟರು.

ಭಕ್ತನ ಯೋಜನೆ ಸಾರ್ಥಕವಾಗಲಿಲ್ಲ.

ಒಂದು ಬಾರಿ ಪ್ರಸಿದ್ಧ ಜನ ನಾಯಕರೊಬ್ಬರು ಮದರಾಸಿಗೆ ಬಂದರು. ಅವರನ್ನು ನೋಡಲು ಹೋಗಬೇಕೆಂದು ಓರ್ವ ಭಕ್ತ ಬಯಸಿದ. ಅವನು ಮದರಾಸಿಗೆ ಹೋಗಲೆಂದು ಮಹರ್ಷಿಗಳ ಅಪ್ಪಣೆ ಬೇಡಿದ. ಅವರು ಶಿಲಾಮೂರ್ತಿಯಂತೆ ಕುಳಿತಿದ್ದರು. ಏನೂ ನುಡಿಯಲಿಲ್ಲ. ಅವನು ಮದರಾಸಿಗೆ ತೆರಳಿದ. ಪ್ರತಿಯೊಂದು ಸಭೆಗೂ ಅವನು ಹೋದ. ಆದರೆ ಅವನಿಗೆ ಆ ನಾಯಕನನ್ನು ಕಾಣುವ ಸೌಭಾಗ್ಯ ಪ್ರಾಪ್ತವಾಗಲೇ ಇಲ್ಲ. ಇಚ್ಛೆಯು ಪೂರ್ತಿಯಾಗದೇ ಆತ ಹಿಂದಿರುಗಿದ. ಮಹರ್ಷಿಗಳು ಹಾಸ್ಯದ ಹೊನಲಲ್ಲಿ ತೇಲುತ್ತ ಕೇಳಿದರು. 'ನೀನು ಮದ್ರಾಸಿಗೆ ಅಪ್ಪಣೆ ಪಡೆಯದೆ ಹೋದೆ. ನಿನ್ನ ಪ್ರವಾಸ ಜಯಪ್ರದವಾಯಿತೆ' ?

ಇಂಥವು ಎಷ್ಟೋ ಘಟನೆಗಳು!

ಮಹರ್ಷಿಗಳು ಅಲ್ಪವೆಂದು ತೋರುವ ಎಲ್ಲ ಘಟನಾವಳಿಗಳಲ್ಲೂ ಮಹತ್ತನ್ನು ಕಾಣುತ್ತಿದ್ದರು.

ಇದು ಮಹರ್ಷಿಗಳ ಆಶ್ರಮಜೀವನದ ವಿಧಾನವಾಗಿದ್ದಿತು.

ನಮ್ಮ ಪುರಾಣಗಳಲ್ಲಿಯೂ ರಾಮಾಯಣ ಭಾರತಾದಿ ಇತಿಹಾಸ ಗ್ರಂಥಗಳಲ್ಲಿಯೂ ವಶಿಷ್ಠ, ವಿಶ್ವಾಮಿತ್ರ, ಕಣ್ವ, ಗೌತಮ, ಜಮದಗ್ನಿ ಮೊದಲಾದ ಋಷಿಗಳ ಆಶ್ರಮದ ವರ್ಣನೆಯನ್ನು ನಾವು ಕೇಳಿದ್ದೇವೆ. ಆದರೆ ಆಧುನಿಕ ಮಹರ್ಷಿಗಳಾದ ರಮಣರ ಆಶ್ರಮದಲ್ಲಿ ನಾವಿಂದು ಅದನ್ನು ಕಣ್ಣಾರ ನೋಡಬಹುದಾಗಿದೆ.



೧೨

## ಮಹಾ ನಿರ್ವಾಣ

ಮಹರ್ಷಿಗಳ ತುಂಬು ಜೀವನ ಹಣ್ಣಾಗುತ್ತ ಬಂದಿತ್ತು. ಅವರಾಗಲಿ ಅವರ ಶಿಷ್ಯವರ್ಗದವರಾಗಲಿ ಊಹಿಸಲು ಸಾಧ್ಯವಿಲ್ಲದಷ್ಟು ಅವರ ಕೀರ್ತಿ ಹಬ್ಬಿತ್ತು. ಆಶ್ರಮ ಜೀವನದಲ್ಲಿ ಯಾವಬಗೆಯ ಬದಲಾವಣೆಯಾಗಲಿ, ಕೊರತೆಯಾಗಲಿ ಕಂಡುಬರಲಿಲ್ಲ.

ಈಗಾಗಲೆ ಮಹರ್ಷಿಗಳು ೭೦ ರ ವಯಸ್ಸನ್ನು ದಾಟಿದ್ದರು. ಅವರ ವಚನಾಮೃತವನ್ನು ಸವಿದು ಲಕ್ಷಾಂತರ ಮಂದಿ ಭಕ್ತರು ತಮ್ಮ ಜೀವನ ವನ್ನು ಪಾವನವಾಗಿಸಿಕೊಂಡಿದ್ದರು. ತಿರುವಣ್ಣಾಮಲೆಯ ರಮಣಾಶ್ರಮ ಒಂದು ಮಹಾ ಯಾತ್ರಾಸ್ಥಳವಾಯಿತು.

೧೯೪೮ರಲ್ಲಿ ಮಹರ್ಷಿಗಳ ಎಡಗೈಯ್ಯಲ್ಲಿ ಹುಣ್ಣೊಂದು ಗೋಚರಿಸಿತು. ಅದು ಮೆಲ್ಲಗೆ ಬೆಳೆದು ಮಹರ್ಷಿಗಳಿಗೆ ಹೇಳತೀರದ ಹಿಂಸೆಯನ್ನು ಕೊಡಲಾ ರಂಭಿಸಿತು. ಸ್ವಲ್ಪ ಮುಟ್ಟಿದರೆ ಸಾಕು ವಿಪರೀತ ನೋವು ಕಾಣಿಸಿಕೊಳ್ಳು ತ್ತಿತ್ತು.

೧೯೪೯ರ ಸುಮಾರಿಗೆ ಈ ಹುಣ್ಣು ನಿಂಬೆ ಹಣ್ಣಿನ ಗಾತ್ರದಷ್ಟಾಯಿತು. ಆ ಹುಣ್ಣನ್ನು ಆಶ್ರಮದ ವೈದ್ಯರು ಶಸ್ತ್ರಚಿಕಿತ್ಸೆಯ ಮೂಲಕ ಕಳೆಯಲೆತ್ನಿಸಿ ದರು. ಸುಮಾರು ಹತ್ತು ದಿನಗಳಲ್ಲಿ ಗಾಯ ಮಾಯಿತು. ಮಹರ್ಷಿಗಳ ಮಾತೃಶ್ರೀಯವರ ಸಮಾಧಿಯ ಮೇಲೆ ನಿರ್ಮಿತವಾದ ದೇವಾಗಾರದ ಪ್ರಾರಂ ಭೋತ್ಸವದ ಸಮಯದಲ್ಲಿ (ಮಹಾ ಕುಂಭಾಭಿಷೇಕ) ಮಹರ್ಷಿಗಳು ಆರೋಗ್ಯ ಭಾಗ್ಯದಿಂದ ಇದ್ದಹಾಗೆ ತೋರಿತು.

ಕೆಲವು ಕಾಲದನಂತರ ಗಾಯ ಮತ್ತೆ ತೋರಿಬಂದಿತು. ಮದರಾಸಿ ನಿಂದ ಸುಪ್ರಸಿದ್ಧ ಸರ್ಜನ್ನರು ಆಗಮಿಸಿ ಮಹರ್ಷಿಗಳ ಹುಣ್ಣನ್ನು ಪರೀಕ್ಷಿಸಿ ದರು. ಅದನ್ನು ಮತ್ತೆ ಶಸ್ತ್ರಚಿಕಿತ್ಸೆಯಿಂದಲೇ ಪರಿಹರಿಸಬೇಕೆಂದು ತೀರ್ಮಾ ನಿಸಿ, ಆಮೇರೆಗೆ ಚಿಕಿತ್ಸೆ ನಡೆಸಿದರು. ಹಾಗೆಯೇ 'ರೇಡಿಯಂ' ಮೂಲಕವೂ ಚಿಕಿತ್ಸೆ ನಡೆಸಲಾಯಿತು.

ಗಾಯ ಮಾಯುತ್ತಿದ್ದಂತೆಯೇ ಮತ್ತೊಂದು ಗಾಯ ಕಾಣಿಸಿತು. ನೋವು ವಿಪರೀತ ಹೆಚ್ಚಾಯಿತು. ವೈದ್ಯರು ಗಾಯವಾದ ಭಾಗವನ್ನು ಶಸ್ತ್ರ ಚಿಕಿತ್ಸೆ ನಡೆಸಿ ತೆಗೆದುಬಿಡಬೇಕೆಂದು ತೀರ್ಮಾನಿಸಿದರು. ಅದರಿಂದ ಭಗವಾನರ ಮಹಾಜೀವವನ್ನು ಉಳಿಸಬಹುದೆಂದು ಅವರ ಅಭಿಮತವಾಗಿತ್ತು. ಭಗವಾನರು ನಕ್ಕರು "ಗಾಬರಿಗೆ ಕಾರಣವಿಲ್ಲ; ದೇಹವೇ ಒಂದು ರೋಗ. ಅದಕ್ಕೆ ನೈಸರ್ಗಿಕವಾಗಿ ಪ್ರಾಪ್ತವಾಗಬೇಕಾದ ಮುಕ್ತಾಯ ಬರಲಿ. ಇಷ್ಟೇಕೆ ತೊಂದರೆ? ಸಾಮಾನ್ಯ ರೀತಿಯಲ್ಲಿ ಒಟ್ಟಿ ಕಟ್ಟಿಬಿಡಿ ಸಾಕು" ಎಂದು ನುಡಿದರು.

ಇಷ್ಟೆಲ್ಲ ನಡೆದ ಮೇಲೆ ಓರ್ವ ಹಳ್ಳಿಯ ವೈದ್ಯ ಮುಂದೆ ಬಂದ. ತನಗೊಮ್ಮೆ ಚಿಕಿತ್ಸೆ ನಡೆಯಿಸುವ ಅವಕಾಶವೀಯಬೇಕೆಂದು ಪ್ರಾರ್ಥಿಸಿದ. ಅವನಿಗೂ ಅವಕಾಶವೀಯಲಾಯಿತು. ಆದರೆ ಆವನ ಯತ್ನಕ್ಕೆ ಯಶಸ್ಸು ಪ್ರಾಪ್ತವಾಗಲಿಲ್ಲ.

ಕೊನೆಗೆ ವೈದ್ಯ ಸಮಿತಿಯೊಂದು ದೀರ್ಘವಾಗಿ ಯೋಚನೆ ಮಾಡಿ ಮತ್ತೊಮ್ಮೆ ಶಸ್ತ್ರಚಿಕಿತ್ಸೆ ನಡೆಸಬೇಕೆಂದು ತೀರ್ಮಾನಿಸಿತು. ಭಗವಾನರನ್ನು ಬಹಳ ಕಷ್ಟದಿಂದ ಚಿಕಿತ್ಸೆಗೆ ಒಪ್ಪಿಸಲಾಯಿತು.

೧೯೪೭ನೇ ಆಗಸ್ಟ್ ೭ನೇ ತಾರೀಖು, ೩ನೆಯ ಬಾರಿ ಮತ್ತೆ ವೈದ್ಯರ ಒಂದು 'ತಂಡ' ಮಹರ್ಷಿಗಳ ಗಾಯದ ಮೇಲೆ ಶಸ್ತ್ರಚಿಕಿತ್ಸೆ ಮಾಡಿತು. ಒಂದು ವಾರದ ನಂತರ ರೇಡಿಯಂ ಚಿಕಿತ್ಸೆ ನಡೆಸಲಾಯಿತು.

ಭಗವಾನರ ಆರೋಗ್ಯ ಸುಧಾರಿಸುತ್ತ ಬಂತು. ಎಲ್ಲರ ಹೃದಯದಲ್ಲೂ ಆಶಾಭಾವನೆ ಮೂಡಿತು.

ಆದರೇನು? ಗಾಯ ಮತ್ತೆ ಕಾಣಿಸಿಕೊಂಡಿತು. ಆಗ ೧೯೪೯ನೇ ನವೆಂಬರ್ ತಿಂಗಳ ಕೊನೆ. ವೈದ್ಯರು ನಾಲ್ಕನೆಯ ಬಾರಿ ಡಿಸೆಂಬರ್ ೧೬ನೇ ತಾರೀಖು ಮತ್ತೆ ಶಸ್ತ್ರಚಿಕಿತ್ಸೆ ನಡೆಯಿಸಿದರು.

ಇಷ್ಟೆಲ್ಲ ನಡೆದ ಮೇಲೆ ಹೋಮಿಯೋಪತಿ ಚಿಕಿತ್ಸೆ ನಡೆಸಲಾಯಿತು. ಏನೂ ಪ್ರಯೋಜನವಾಗಲಿಲ್ಲ. ಮೊದಲ ಗಾಯದ ಬಳಿ ಮತ್ತೊಂದು ಗಾಯ ಕಾಣಿಸಿಕೊಂಡಿತು. ತೀವ್ರವಾಗಿ ಬಳೆಯಿತು.

ಇಬ್ಬರು ಪ್ರಸಿದ್ಧ ಆಯುರ್ವೇದ ವೈದ್ಯರು ಮುಂದೆ ಬಂದರು. ಅವರೂ ಸಹ ಬಹಳ ಭಯಭಕ್ತಿಯಿಂದ ಚಿಕಿತ್ಸೆ ನಡೆಯಿಸಿದರು. ಪ್ರಯೋಜನ ವಾಗಲಿಲ್ಲ.

ಮಹರ್ಷಿಗಳ ಎಡಗೈ ಪೂರ್ತಿಯಾಗಿ ಬಾತುಹೋಯಿತು.

ಗಾಯದಿಂದ ಸುರಿಯುತ್ತಿದ್ದ ರಕ್ತ ಮತ್ತು ಕೀವಿನಿಂದಾಗಿ ಭಗವಾನರಿಗೆ ಅನೀಮಿಯಾ ಗಂಟುಬಿತ್ತು. ಗಾಯದ ವಿಷ ದೇಹದ ಸಕಲಭಾಗಕ್ಕೂ ಹಬ್ಬಿಹೋಗಿತ್ತು.

ಇಷ್ಟೆಲ್ಲ ನೋವು ಇದ್ದರೂ ಭಗವಾನರು ಅದರ ಕಡೆಗೆ ಗಮನವನ್ನೇ ಇತ್ತಿದ್ದಿಲ್ಲ. ಯಾವ ಚಿಕಿತ್ಸೆಯ ಬಗೆಗೂ ಅವರ ವೈಯ್ಯಕ್ತಿಕ ಅಪೇಕ್ಷೆ ಇರಲಿಲ್ಲ. ಆಶ್ರಮವಾಸಿಗಳು ಇಂಥ ಚಿಕಿತ್ಸೆ ನಡೆಯಬೇಕೆಂದು ಕೇಳಿದಾಗಲೆಲ್ಲ ಭಗವಾನರು ಒಪ್ಪಿಕೊಳ್ಳುತ್ತಿದ್ದರು. "ಆಗುವುದನ್ನೆಲ್ಲ ನಾವು ನೋಡಬೇಕು" ಎಂದು ಹೇಳಲಾಗುವುದಷ್ಟೆ. ಆ ಮಾತು ಈಗ ಸಂಪೂರ್ಣ ನಿದರ್ಶನಕ್ಕೆ ಬಂತು.

ಭಕ್ತವೃಂದಕ್ಕೆ ಗಾಬರಿ ಹೆಚ್ಚಾಯಿತು. ಓರ್ವನು ಬಂದು ಗಾಬರಿಯಿಂದಲೇ ಕೇಳಿದ 'ಮುಂದೇನು ?' ಎಂದು. ಮಹರ್ಷಿಗಳು ನಕ್ಕು ನುಡಿದರು. 'ಯಾವುದಾದರೂ ಚಿಕಿತ್ಸೆ ನಡೆಸಬೇಕೆಂದು ನಾನು ಕೇಳಿದ್ದೇನೆಯೆ ? ಇದೆಲ್ಲ ನಿಮಗೆ ಬೇಕಾಗಿದೆ. ಈಗ ನೀವೇ ತೀರ್ಮಾನಿಸಿ. ನನ್ನನ್ನು ಕೇಳಿದರೆ! ನಾನು ಮೊದಲಿಂದಲೂ ಚಿಕಿತ್ಸೆಯೇ ಬೇಡ ಎಂದು ಹೇಳಿದ್ದೇನೆ. ಏನಾಗ ಬೇಕಾಗಿದೆಯೋ ಅದಾಗಲಿ' ಎಂದು ಉತ್ತರವಿತ್ತರು.

ಈ ಮಾತುಕೇಳಿ ಎಲ್ಲ ವೈದ್ಯರಿಗೂ ಪರಮಾಶ್ಚರ್ಯವಾಯಿತು. -

ಆಗಸ್ಟ್‌ನಲ್ಲಿ ಮತ್ತೊಂದು ಶಸ್ತ್ರಚಿಕಿತ್ಸೆ ನಡೆಯಿತು. ಚಿಕಿತ್ಸೆ ನಡೆದು ಕೆಲವು ಗಂಟೆಗಳಲ್ಲಿಯೇ ಮಹರ್ಷಿಗಳು ಭಕ್ತಕೋಟಿಗೆ ದರ್ಶನವೀಯಲು ನಿರ್ಧರಿಸಿದರು.

ಭಕ್ತವೃಂದ ಮಹರ್ಷಿಗಳ ದರ್ಶನ ಪಡೆದು ಧನ್ಯವಾಯಿತು.

೧೯೫೦ನೇ ಜನವರಿ ೫ನೇ ತಾರೀಖು ಭಗವಾನ್ ರಮಣರ ೭೧ನೇ ಜನ್ಮೋತ್ಸವ ಆಚರಿಸಲ್ಪಟ್ಟಿತು. ಭಗವಾನರು ಬೆಳಿಗ್ಗೆ ಮತ್ತು ಸಂಜೆ ಭಕ್ತರಿಗಾಗಿ ದರ್ಶನವೀಯಲು ಹಾಗೆಯೇ ಎದ್ದು ಕುಳಿತಿರುತ್ತಿದ್ದರು.

ಅರುಣಾಚಲ ದೇವಾಲಯದ ಆನೆ ಆಶ್ರಮಕ್ಕೆ ಬಂದು ಮಹರ್ಷಿಗಳ ದರ್ಶನ ಪಡೆದು ಅವರ ಪಾದವನ್ನು ತನ್ನ ಸೊಂಡಲಿನಿಂದ ಮುಟ್ಟಿ ತೆರಳುತ್ತಿತ್ತು.

ಭಕ್ತರು ಬರೆದ ಭಕ್ತಿ ಗೀತೆಗಳನ್ನು ಮಹರ್ಷಿಗಳು ಕೇಳಿ ಸಂತೋಷಪಡುತ್ತಿದ್ದರು.

ಎಲ್ಲ ವಾತಾವರಣ ಸಂತಸಮಯವಾಗಿತ್ತು.

೧೯೫೦ನೇ ಏಪ್ರೆಲ್ ೧೪ನೇ ತಾರೀಖು. ಕಳೆದ ಐದಾರು ದಿನಗಳಿಂದಂತೂ ಅವರ ಕೈಹುಣ್ಣು ತೀರ ಉಲ್ಬಣಾವಸ್ಥೆಗೆ ಬಂದಿತ್ತು. ಅವರ ದೇಹ ತೀರ ಕುಗ್ಗಿಹೋಗಿತ್ತು. ದೇಹ ಕುಗ್ಗಿದರೇನಾಯ್ತು? ಅವರ ಆಧ್ಯಾತ್ಮ ತೇಜಸ್ಸು ಮುಖದಲ್ಲಿ ಪ್ರಖರವಾಗಿ ಹೊಳೆಯುತ್ತಿತ್ತು. ಅವರ ಎರಡು ಕಣ್ಣುಗಳು ನಕ್ಷತ್ರದೋಪಾದಿಯಲ್ಲಿ ಮಿನುಗುತ್ತಿದ್ದವು.

ಮಹರ್ಷಿಗಳು ಎಂದಿನಂತೆ ಈ ದಿನವೂ ಎರಡುಬಾರಿ ದರ್ಶನವಿತ್ತರು. ಅವರು ಮಲಗಿದ್ದ ಸ್ಥಳಕ್ಕೆ ಸಹಸ್ರಾರು ಜನ ಬಂದು ದರ್ಶನ ಪಡೆದರು.

ಭಗವದ್ಗೀತೆಯಲ್ಲಿ ಉಕ್ತವಾಗಿರುವಂತೆ ಮಹಾತ್ಮರಾದವರು ತಮ್ಮ ಅಂತ್ಯ ಸಮೀಪಿಸಿತೆಂಬುದನ್ನು ಅರಿತು, ಯೋಗಮುದ್ರೆಯಲ್ಲಿ ಮೌನಿಗಳಾಗಿ ಕುಳಿತುಕೊಳ್ಳುತ್ತಾರಷ್ಟೆ! ಅವರ ನಿರ್ಮಲವಾದ ಮನಸ್ಸು ಮತ್ತು ಹೃದಯಗಳು ಪರಬ್ರಹ್ಮನಲ್ಲಿ ಲೀನವಾಗಿ ಪರಿಪೂರ್ಣ ಶಾಂತಿಯಲ್ಲಿ ನೆಲೆಗೊಳ್ಳುವವು. ಇದು ಮಹರ್ಷಿಗಳ ಜೀವನದಲ್ಲಿ ಸತ್ಯವಾಯಿತು.

ಸಾಯಂಕಾಲದ ಪ್ರಾರ್ಥನೆ ಆಶ್ರಮವಾಸಿಗಳಿಂದ ಯಥಾವಿಧಿಯಾಗಿ ಸಾಗಿತು. ಎಲ್ಲರೂ ಪ್ರಾರ್ಥನೆಯಲ್ಲಿ ಲೀನವಾಗಿದ್ದರು.

ಮುಂದೇನಾಗುತ್ತದೆ ? ಎಂಬುದು ಯಾರಿಗೂ ಗೋಚರವಾಗದು. ಅದು ಸರ್ವಕಾಲಕ್ಕೂ ನಿಗೂಢತತ್ವ.

ರಾತ್ರಿ ೮ ಗಂಟೆಯ ಸಮಯ. ಮಹರ್ಷಿಗಳು ಹಣ್ಣಿನ ರಸವನ್ನು ಸ್ವೀಕರಿಸಿದರು. ಭಕ್ತರೊಡನೆ ಎಂದಿನಂತೆ ಸಂಭಾಷಿಸಿದರು. ಅವರ ಮುಖ ದಲ್ಲಿ ಎಂದಿಗಿಂತ ಹೆಚ್ಚಾಗಿ ತೇಜಸ್ಸು ಕಂಗೊಳಿಸುತ್ತಲಿತ್ತು.

'ಅರುಣಾಚಲ ಶಿವ, ಅರುಣಾಚಲ ಶಿವ' ಎಂದು ಭಕ್ತರು ಒಂದೇ ಸಮನೆ ಭಜನೆ ನಡೆಸಿದ್ದರು

ನೀಲಾಕಾಶದಲ್ಲಿ ಇದ್ದಕ್ಕಿದ್ದಂತೆ ತೇಜಃಪುಂಜವಾದ ನಕ್ಷತ್ರವೊಂದು ಭೂಮಿಗೆ ಬಿತ್ತು. ಭಾವುಕರಾದ ಸಮಸ್ತ ಜನಕೋಟಿ ಇದನ್ನು ಕಂಡರು. ಯಾವ ಮಹಾ ಜೀವಕ್ಕೆ ಅಂತ್ಯ ಕಾದಿದೆಯೋ ಎಂದು ಕುತೂಹಲಾವಿಷ್ಟ ರಾದರು.

ಜನಗಳ ಊಹೆ ಸುಳ್ಳಾಗಲಿಲ್ಲ.

ಭಗವಾನ್ ಶ್ರೀ ರಮಣ ಮಹರ್ಷಿಗಳು ಅದೇರಾತ್ರಿ ೮-೪೭ಕ್ಕೆ ಪ್ರಶಾಂತ ಗಂಭೀರವದನರಾಗಿ ಮಹಾ ನಿರ್ವಾಣವನ್ನು ಹೊಂದಿದರು.

ಕ್ಷಣಮಾತ್ರದಲ್ಲಿ ಅಧ್ಯಾತ್ಮ ಜಗತ್ತಿನ ತೇಜೋಮಯವಾದ ಸೂರ್ಯ ನೊಬ್ಬನು ಅಸ್ತಂಗತನಾದ ವಾರ್ತೆ ವಿಶ್ವವನ್ನು ವ್ಯಾಪಿಸಿತು. ಜಗತ್ತಿಗೇ ಕೊಂಚಹೊತ್ತು ಕತ್ತಲು ಮುಸುಕಿದಂತಾಯಿತು.

ಮಹರ್ಷಿಗಳ ಅಂತ್ಯದರ್ಶನ ಪಡೆಯಲು ಭಾರತದ ಮೂಲೆ ಮೂಲೆ ಗಳಿಂದ ಲಕ್ಷೋಪಲಕ್ಷ ಜನ ಆಗಮಿಸಿದರು. ಮಹರ್ಷಿಗಳ ಪಾರ್ಥಿವ ಶರೀರ ವನ್ನು ಗುಲಾಬಿ ಹೂಗಳಿಂದ ಅಲಂಕರಿಸಲಾಗಿತ್ತು. ಕೊನೆಯಬಾರಿ ಎಲ್ಲರೂ ದರ್ಶನ ಪಡೆದರು.

ಆಶ್ರಮದ ನೆರೆಯಲ್ಲಿಯೇ ಇದ್ದ ಮಾತೃಭೂತೇಶ್ವರ ದೇವಾಲಯದ ಉತ್ತರ ಭಾಗದಲ್ಲಿ ಮಹರ್ಷಿಗಳ ಸಮಾಧಿಗಾಗಿ ಕಲ್ಲಿನ ಸುಂದರ ಕಟ್ಟಡ ವೊಂದು ನಿರ್ಮಿತವಾಗಿತ್ತು.

ಸಮಾಧಿಗೆ ಸಕಲ ಸಿದ್ಧತೆಯೂ ಯಥಾವಿಧಿಯಾಗಿ ನೆರವೇರಿತ್ತು. ೧೫ ಪುಣ್ಯ ನದಿಗಳ ಜಲವೂ, ಮರಳೂ, ಅನರ್ಘ್ಯ ನವರತ್ನಗಳೂ, ವಿಭೂತಿ ಕರ್ಪೂರ ಮೊದಲಾದವುಗಳೂ ಸಮಾಧಿಗೆ ಅರ್ಪಿಸಲ್ಪಟ್ಟಿದ್ದವು. ಮಹರ್ಷಿ ಗಳ ಪಾರ್ಥಿವ ಶರೀರವನ್ನು ಸಮಾಧಿಗೊಳಿಸಲಾಯಿತು.

ಭಗವಾನ್ ರಮಣರ ಕೆಳಗಿನ ಈ ಅಮೃತವಾಣಿಯೊಂದನ್ನು ನೆನೆದು ಮಹರ್ಷಿಗಳ ಮಹಾ ಜೀವನದ ಮಹಾ ಕಥೆಯನ್ನು ಮುಕ್ತಾಯಗೊಳಿಸಬಹುದು.

ನಾನು ಸಾಯುತ್ತಿದ್ದೇನೆಂದು ಹೇಳುತ್ತಾರೆ. ಆದರೆ ನಾನು ಹಿಂದಿನಗಿಂತ ಹೆಚ್ಚಾಗಿ ಜೀವಿಸಿರುತ್ತೇನೆ. ನೀಲಾಕಾಶದಲ್ಲಿ ಮೋಡಗಳು ನೆರೆಯುತ್ತವೆ; ಚದುರುತ್ತವೆ. - ಆದರೆ ಅದರಿಂದ ಆಕಾಶಕ್ಕೆ ಯಾವ ಕುಂದೂ ಇಲ್ಲ. ಅದರಂತೆಯೇ ದೇಹದ ಜನನ-ಮರಣಗಳು ಆತ್ಮಕ್ಕೆ ಆವರಿಸಲಾರವು.

ಹುಟ್ಟು ಸಾವುಗಳು ಜೀವಿಗಳಿಗೆ ಗಂಟು ಬಿದ್ದಿರುವ ಬೇನೆಗಳು. ಒಂದು ದೃಷ್ಟಿಯಿಂದ ಜನನ-ಮರಣಗಳು ಜೀವನ ಪ್ರಗತಿಗೆ ಸಾಧನವೂ ಅಹುದು. ಸಾಯುವುದು ಅಂದರೆ, ವಾಯು, ನೀರು, ಬೆಂಕಿ, ಬೆಳಕು, ಬಯಲು ಎಂಬ ಐದು ಭೂತಗಳಿಂದಾದ ಶರೀರದಲ್ಲಿದ್ದ ಆತ್ಮನು ಶರೀರದಿಂದ ಬೇರೆಡೆಗೆ ಹೋಗುವುದು ಎಂದರ್ಥ. ಗೀತೆಯು, ದೇಹಗಳು ಆತ್ಮನು ಧರಿಸಿದ ಅಂಗಿಗಳು' ಎಂದು ಹೇಳಿ ಅಂಗಿ (ದೇಹ) ಹಳೆಯದಾದಮೇಲೆ ಅದನ್ನು ಕಳಚಿ ಹೊಸ ಕವಚ (ದೇಹ) ಧರಿಸುವುದು ಜೀವನ ಸ್ವಭಾವ ಎಂದು ಹೇಳಿದೆ. ತಿಳಿವಿಲ್ಲದವರಿಗೆ ಜನನ-ಮರಣಗಳು ಆಶ್ಚರ್ಯ-ಭಯಂಕರಗಳಾಗಿ ಕಂಡರೂ ಜ್ಞಾನಿಗಳಿಗೆ ಇದು ಸಾಮಾನ್ಯ ವಿಷಯ. ಹುಟ್ಟು ಸಾವಿಗೆ ಅಂಜದಿರುವುದೇ ಜ್ಞಾನದ ಲಕ್ಷಣ. ಈ ಭವಮಾಲೆಯನ್ನು ಗೆಲ್ಲುವುದೇ ಮೋಕ್ಷಸಾಧನ. ಇದರ ಗುಟ್ಟು ಗುರಿಗಳನ್ನು ಹೇಳಲಿಕ್ಕಾಗಿಯೇ ರಮಣ ಮಹರ್ಷಿ, ರಾಮಕೃಷ್ಣ ಪರಮಹಂಸ, ಅರವಿಂದ ಘೋಷರಂತಹ ಜ್ಞಾನಿಗಳ ಅವತಾರ. ಜ್ಞಾನಿಗಳು ಮರ

ಣವನ್ನು ಸ್ವಾಗತಿಸುವರು. ಅದಕ್ಕಾಗಿಯೇ 'ಶರಣರ ಗುಟ್ಟು ಮರಣದಲ್ಲಿ' ಎಂಬ ಗಾದೆ ಹುಟ್ಟಿದೆ. ಶ್ರೀ ರಮಣ ಮಹರ್ಷಿಗಳ ಅಂತ್ಯ ಗಂಭೀರವಾದುದು ಪ್ರಶಾಂತವಾದುದು.



೧೩

## ರಮಣರ ಮಾರ್ಗ

ರಮಣರ ಮಾರ್ಗ ಅವರದೇ ಆಗಿದೆ. ಕ್ರಿಸ್ತ, ಬುದ್ಧರಂತೆ ಅವರು ಹೊಸತಾದ ದಾರಿ ಹಿಡಿಯಲಿಲ್ಲ. ಮಾನವರಿಗೆ ಅವರೊಂದು ಸಂದೇಶ ಬೀರ ಬೇಕೆಂದು ಲೋಕಕ್ಕೆ ಬಂದವರು.

ಕಲಿಯುಗದಲ್ಲಿ ಭಗವನ್ನಾಮ ಸಂಕೀರ್ತನಕ್ಕೆ ಪ್ರಾಧಾನ್ಯತೆ ಕೊಡಲ್ಪಡ ಬೇಕೆಂಬುದು ಅನೇಕ ಮಹಾತ್ಮರ ಆಶಯ. ನಾಮ-ಜಪವೇ ಮುಖ್ಯವೆಂದು ಅವರು ಒತ್ತಿಒತ್ತಿ ಹೇಳಿದ್ದಾರೆ. ಕಲಿಯುಗದಲ್ಲಿ 'ಜ್ಞಾನಮಾರ್ಗ' ಅಷ್ಟಾಗಿ ಫಲಕಾರಿಯಾಗದೆಂದು ಅವರು ತಿಳಿಸಿದ್ದಾರೆ. ಆದರೆ ಜ್ಞಾನಮಾರ್ಗವನ್ನೇ ಮಾನವ ಜನಾಂಗಕ್ಕಾಗಿ ಪುನಃ ತೆರೆಯಬೇಕೆಂದು ಭಗವಾನರು ಬಯಸಿದರು. ಆತ್ಮದರ್ಶನವೇ ಪ್ರಾಮುಖ್ಯವಾದುದೆಂದು ಬೋಧಿಸಿದರು.

"ನಾನು ಯಾರು ಎಂಬುದನ್ನು ವಿಚಾರಿಸು. ?" ಇದು ಅವರ ಮೂಲೋಪದೇಶ. ಇದರ ಒಳಾರ್ಥವನ್ನು ತಿಳಿ ಎಂಬುದು ಅವರ ಸಂದೇಶ.

ನಾನು ಯಾರು ? ಎಂಬುದನ್ನು ತಿಳಿಯುವ ದಾರಿಗೆ ಭಗವಾನರು 'ವಿಚಾರ ಅಥವಾ ಆತ್ಮಸಂದರ್ಶನ'ಎಂದು ಕರೆದರು. ಅದನ್ನು ಹೃದಯ ಪ್ರಕ್ರಿಯೆಯ ಮೇಲೆ ನಿಲ್ಲಿಸಿದ್ದಾರೆ 'ವಾದಿಸಿ ಫಲವಿಲ್ಲ; ಪ್ರಯತ್ನಿಸಬೇಕು' ಎಂಬುದು ಅವರ ಸಲಹೆ ಮತ್ತು ಸಂದೇಶ.

ಅಹಂಕಾರದ ಕೈ ಬಲವಾಗಬಾರದು. ಅದು ಯಾವ ಕಾಲಕ್ಕೂ ಬಲವಾಗಬಾರದು. ಆ ರೀತಿಯಲ್ಲಿಯೇ ಜೀವನ ವಿಧಾನವನ್ನು ಅಳವಡಿಸಿ, ಎಂದೂ ಸಹ ರಮಣರು ಆಡದಿದ್ದರೂ ಮೌನ ಮುಖಮುದ್ರೆಯಿಂದಲೇ ಸೂಚಿಸಿದರು.

"ನೀನು ಬಂದುದೆಲ್ಲಿಂದ ? ಏತಕ್ಕಾಗಿ ? ಯಾರಿಗಾಗಿ ?" ಈ ಪ್ರಶ್ನೆಗಳನ್ನು ಕೂಲಂಕಷವಾಗಿ ಚರ್ಚಿಸುತ್ತ ಹೋದಾಗ ಇದರ ಮೂಲ 'ನಾನು' ಎಂಬಲ್ಲಿಗೆ ಹೋಗಿ ಮುಟ್ಟುತ್ತದೆ. ಇದು ತಪಸ್ಸಾಧನೆ ಮತ್ತು ಧ್ಯಾನದ ಮೂಲ, ಉತ್ತರ. ಮಾನಸಿಕವಾಗಿಯಾಗಲಿ ಅಥವಾ ಬಾಯಿಯಿಂದಾಗಲಿ

ಸ್ಪಷ್ಟಪಡಿಸುವುದು ಸಾಧ್ಯವಿಲ್ಲ. ದೇಹ ಮತ್ತು ಮನಸ್ಸುಗಳಿಗೆ 'ನಾನು' ವಿಚಾರದ ಬಗ್ಗೆ ಗೊತ್ತಿದ್ದರೂ ಅದರ ತಿಳಿವು ದೈಹಿಕವೂ ಅಲ್ಲ; ಮಾನಸಿಕವೂ ಅಲ್ಲ. ಅದನ್ನು ವರ್ಣಿಸುವುದು ಕಿವುಡ ಧ್ವನಿಮಾಧುರ್ಯದ ಬಗ್ಗೆ ಹೇಳಿದಂತೆ.

ಎಲ್ಲ ವಿಚಾರಗಳೂ ಧ್ಯಾನದಲ್ಲಿಯೇ ಉದ್ಭವವಾಗುತ್ತವೆ. ಅದೇ ಸರಿಯಾದ ಮಾರ್ಗ. ಆ ಮೂಲಕ ಅಂತರಂಗದ ವಿಚಾರ ಬಹಿರಂಗವಾಗುವುದು. ಒಳವಿಚಾರ ಹೊರಬೀಳುವ ತನಕ ಅದನ್ನು ನಿರ್ಮೂಲಗೊಳಿಸುವುದಾದರೂ ಹೇಗೆ ?

ಯಾವ ಸಾಧನಾಮಾರ್ಗಕ್ಕೇ ಆಗಲಿ ಜೀವನ ಪಾವಿತ್ರ್ಯತೆ ಅತಿ ಮುಖ್ಯ. ಜೊತೆಗೆ ಆಧ್ಯಾತ್ಮ ಮಾರ್ಗಾನುಸರಣೆ ಅವಿರತವಾಗಿ ಸಾಗಬೇಕು. ಭಗವಾನ್ ರಮಣರು ವಿಚಾರ ಮಾರ್ಗವನ್ನು ತೋರಿ ಭಕ್ತವೃಂದಕ್ಕೆ ತುಂಬ ನೆರವು ನೀಡಿದರು. ಅವರ ಉದ್ಧಾರಕ್ಕೆ ಕಾರಣರಾದರು.

ಬ್ಯಾಂಕಿನ 'ಕ್ಯಾಷಿಯರ್'ನಂತೆ ಮನುಷ್ಯ ಬಾಳಿನಲ್ಲಿ ಮುನ್ನಡೆಯಬೇಕೆಂದು ರಮಣರು ಸೂಚಿಸುತ್ತಿದ್ದರು. ಕ್ಯಾಷಿಯರ್ ಲಕ್ಷಾಂತರ ರೂಪಾಯಿಗಳಲ್ಲಿ ತನ್ನ ಕೈಯಿಂದ ವ್ಯವಹಾರ ಸಾಗಿಸಿದರೂ ಅದರ ಇತಿಮಿತಿ ಅವನಿಗೆ ಚೆನ್ನಾಗಿ ಗೊತ್ತಿದ್ದರೂ ಅವನು ಅದರ ಜಂಜಡದಿಂದ ದೂರವಾಗಿರುವನು. ಹಾಗೆಯೇ ಜೀವನದ ಸಂಕಷ್ಟಗಳಿಂದ ಆವಿರ್ಭೂತನಾಗದೆ ಆತ್ಮದರ್ಶನ ಪಡೆದು ಜೀವನವನ್ನು ಸುಲಲಿತವಾಗಿ ಸಾಗಿಸಬಲ್ಲನು. ಇದು ಅವರು ತೋರಿದ ರಾಜಮಾರ್ಗ.

ವಿಚಾರ ಮಾರ್ಗವನ್ನು ಜ್ಞಾನದ ಮೂಲಕವೇ ಬಳಸಬೇಕೆಂದೂ ಅದೂ ಒಂದು ದೃಷ್ಟಿಯಲ್ಲಿ ಕರ್ಮಮಾರ್ಗವೇ ಎಂದೂ ಸಹ ಭಗವಾನ್ ರಮಣ ಮಹರ್ಷಿಗಳು ಸ್ಪಷ್ಟೀಕರಿಸಿದರು.

ಧರ್ಮದ ಸಂಕುಚಿತ ಮನೋಧರ್ಮವನ್ನು ಅವರು ಬೆಳೆಯಗೊಡಲಿಲ್ಲ. ಯಾರೇ ಬರಲಿ ಯಾವ ಧರ್ಮದವರೇ ಆಗಲಿ 'ನಾನು ಯಾರು ?' ಎಂಬು

ದಕ್ಕೆ ಉತ್ತರ ಹೇಳಲು 'ವಿಚಾರಮಾರ್ಗ'ವನ್ನು ಹಿಡಿ ಎಂದು ಸೂಚಿಸಿ ಬಿಡು ತ್ತಿದ್ದರು. ಏನೇನೋ ಕೇಳಬೇಕೆಂದು ಬಂದ ಭಕ್ತರು ಬರಿ ಸಂದರ್ಶನದ ಲ್ಲಿಯೇ ಉತ್ತರ ಪಡೆದು ಹಿಂದಿರುಗಿದ ಉದಾಹರಣೆಗಳನೇಕವಿವೆ. ಅನೇಕ ಜನ ಪಾಶ್ಚಾತ್ಯರು ಮಹರ್ಷಿಗಳನ್ನು ಮೊದಲ ಸಲ ಸಂದರ್ಶಿಸಿದ ಮೇಲೆ ತಮ್ಮ ಮನಸ್ಸಿನ ಮೇಲಾನ ಪರಿಣಾಮವನ್ನು ಬಹಳ ಸೊಗಸಾಗಿ ವಿವರಿಸಿದ್ದಾರೆ. ಭಕ್ತ ಓಸ್‌ಬರ್ನ್‌ರವರು ಹೀಗೆ ಬರೆದವರಲ್ಲಿ ಮುಖ್ಯರು.

ಇನ್ನೊಂದು ಬಹು ದೊಡ್ಡ ವಿಚಾರ. ರಮಣರ ವಿಚಾರಮಾರ್ಗಕ್ಕೆ ಯಾರೂ ಹೊರತಾಗುವಂತಿಲ್ಲ. ಅದನ್ನು ಇಂಥವರೇ ಪಾಲಿಸಬೇಕೆಂದು ಕಟ್ಟುನಿಟ್ಟಿಲ್ಲ. ಮಹಿಳೆಯರು, ಕಛೇರಿ ಗುಮಾಸ್ತರು, ಹಡಗಿನ ಇಂಜಿನಿ ಯರು ಮತ್ತು ನೌಕರು,ಹೆಚ್ಚೇನು ಮಾನವ ಪ್ರಪಂಚ, ಎಲ್ಲ ಕುಲವೃತ್ತಿಯ ಜನ ಅವರ ವಿಚಾರ ಮಾರ್ಗ ಅನುಸರಿಸಿ ಆತ್ಮದರ್ಶನ ಪಡೆಯಬಹುದು. ಇದೇ ಅವರ ಮಾರ್ಗದ ಹಿರಿಮೆ.







## ಶ್ರೀ ರಮಣ ವಚನಾಮೃತ

### ಗುರು

ತನ್ನಲ್ಲಿ ಮತ್ತು ಇತರರಲ್ಲಿ ಭೇದವನ್ನೆಣಿಸದವನೂ ಮತ್ತು ಸರ್ವದಾ ಆತ್ಮಧ್ಯಾನದಲ್ಲಿ ಲೀನನಾದವನೂ ಗುರು. ಅವನೆಂದೂ ಉದ್ರಿಕ್ತನಾಗನು. ಆತ್ಮಸಾಕ್ಷಾತ್ಕಾರದಿಂದ ಬಹಿರ್ಮುಖನಾಗನು.

### ಶಿಷ್ಯ

ಜೀವನದ ದುಃಖದಿಂದ ಪಾರಾಗಬೇಕೆಂದು ಒಮ್ಮನಸ್ಸಿನಿಂದ ಇಚ್ಛಿಸಿ ಆ ದಾರಿಯಲ್ಲಿ ನಡೆಯುವವನೇ ಶಿಷ್ಯ. ಇದಲ್ಲದೆ ಬೇರಾವ ಆಶೆಯೂ ಅವನನ್ನು ಮುತ್ತಬಾರದು.

### ಗುರು ಮತ್ತು ದೇವರು

ಗುರು ಮತ್ತು ದೇವರು ಬೇರೆ ಬೇರೆಯಲ್ಲ. ಇಬ್ಬರೂ ಒಂದೇ. ಗುರುವಿನ ಕೃಪೆ ಪಡೆದವನು ಸರ್ವದಾ ರಕ್ಷಿಸಲ್ಪಡುವನು; ಅವನನ್ನು ಎಂದೂ ಕೈಬಿಡಲಾಗುವುದಿಲ್ಲ.

ದೇವರೆಂದರೆ ಗುರು; ಗುರುವೆಂದರೆ ದೇವರು. ಗುರುಕರುಣೆ ಪಡೆದಿರುವವನು ಧನ್ಯನು.

ಗುರು ತೋರಿದ ಮಾರ್ಗದಲ್ಲಿ ಶಿಷ್ಯ ನಡೆಯಬೇಕು.

ಸಾಧು ಸಮಾಗಮದಿಂದ ಮೋಕ್ಷ ಪ್ರಾಪ್ತವಾಗುತ್ತದೆ; ಆದ್ದರಿಂದ ಅಂಥವರ ಸಂಗವನ್ನೇ ಮಾಡಬೇಕು.

ಮಹಾತ್ಮರ ದರ್ಶನಮಾತ್ರದಿಂದಲೇ ಎಲ್ಲ ದುಃಖ ಮತ್ತು ಅನಿಷ್ಟಗಳು ನಿವಾರಣೆಯಾಗುತ್ತದೆ. ಮಾನವನ ಆತ್ಮ ಪರಿಶುದ್ಧವಾಗುತ್ತದೆ.

ಜಗತ್ತಿನಿಂದ ಅತೀತರಾದವರೂ ಮುಖಸ್ತುತಿಯ ಹಿಡಿತದಿಂದ ಪಾರಾಗುವುದು ಅಸಾಧ್ಯ.

## ಜ್ಞಾನಿ

ದೃಷ್ಟಾಂತ ಹುಲಿಯ ಕೈಗೆ ಬಿದ್ದ ಬೇಟೆ ಪಾರಾಗುವುದು ಸಾಧ್ಯವೇ ಇಲ್ಲ, ಹಾಗೆ ಶಿಷ್ಯ ಗುರು ತೋರಿದ ದಾರಿಯಲ್ಲಿ ಚಾಚೂ ತಪ್ಪದಂತೆ ಮಾತ್ರ ಸಾಗಬೇಕು.

## ಸರ್ವಾತ್ಮರ ಆತ್ಮ ಗುರು

ಆತ್ಮದ ಅಂತರಾಳದಲ್ಲಿ ಸರ್ವ ಕಾಲದಲ್ಲಿ ನೆಲಸಿರುವವನೇ ಗುರು. ಆತ ತಾನು ಮತ್ತು ಇತರರು ಎಂಬ ತಾರತಮ್ಯವನ್ನೇ ಮಾಡುವುದಿಲ್ಲ. ತಾನೇ ಅಂಥವನು ಎಂಬ ಅಹಂಕಾರ ಅವನನ್ನು ಮುತ್ತದು. ಅವನ ಸುತ್ತಲಿನವರು ಅಜ್ಞಾನದ ಕತ್ತಲಲ್ಲಿದ್ದಾಗ್ಯೂ ಇವನು ಬೆಳಕು ಕಾಣುವನು. ಅವನ ದೃಢ ವಿಶ್ವಾಸವನ್ನು ಕದಲಿಸುವವನು ಭೂಮಂಡಲದಲ್ಲಿಯೇ ಇಲ್ಲ. ಯಾವಕಾಲಕ್ಕೂ ಅವನನ್ನು ಅಲುಗಾಡಿರುವುದು ಸಾಧ್ಯವಿಲ್ಲ. ಅವನನ್ನು 'ಧೃತಿ ಮೇರು' ಎನ್ನಬಹುದು.

ಯೋಗಶಕ್ತಿಯನ್ನು ಪಡೆದವನೇ ಗುರು ಎಂದು ಹೇಳುವುದು ಸರಿಯಲ್ಲ. ಯಾವ ಗುರುವೂ ತಾನು ಯೋಗಶಕ್ತಿ ಪಡೆಯಬೇಕೆಂದು ಚಿಂತಿಸಿಲ್ಲ. ಅದು ನಿತ್ಯ ಜೀವನಕ್ಕೆ ಅಗತ್ಯವೂ ಅಲ್ಲ.

ಗುರು ಆಡಿದ ಮಾತು ಅಸತ್ಯವಾಗದು.

ಗುರುವಿಗೆ ನೀನು ಪ್ರಶ್ನೆಹಾಕಿದಾಗ ಅವನಿಗೆ ಎಂದೂ ಆಶ್ಚರ್ಯವಾಗಲಾರದು. ಅವನು ಯಾವ ಕಾಲಕ್ಕೂ ಪ್ರಸನ್ನ ಚಿತ್ತನಾಗಿರುವನು.

ಗುರುದೇವನಲ್ಲಿ ಆತ್ಮ ಸಮರ್ಪಣ ಮಾಡುವನು. ಅವನೇ ದೇವರಾಗುವನು. ಸುಖಕರ ಪರಮೋತ್ತಮ ಸ್ಥಿತಿಯಾದ ಪರಮಾತ್ಮನಾಗುವನು. ಅವನ ಕೃಪಾಶೀರ್ವಾದವಿಲ್ಲದೆ ಆತನ ಬಳಿಗೆ ಯಾರೂ ಸುಳಿಯಲಾರರು.

## ಆತ್ಮ ದರ್ಶನ

ಗುರು ಕೃಪೆಯಿಲ್ಲದೆ ಯಾವ ಶಿಷ್ಯನೂ ಆತ್ಮ ದರ್ಶನ ಪಡೆಯಲಾರನು.

## ಗುರು ತೋರುವ ದಾರಿ

ಗುರುವು ಅಂತರಂಗ ಮತ್ತು ಬಹಿರಂಗಗಳಲ್ಲೂ ಶಿಷ್ಯನಿಗೆ ಮಾರ್ಗ ದರ್ಶನ ಮಾಡುವನು.

ಹೊರಗಿನಿಂದ'ನಿನ್ನನ್ನು ನೀನು ಅರಿತುಕೋ' ಎಂದು ಸೂಚನೆ ಕೊಡುವನು. ಅದು ಮನಸ್ಸಿಗೆ ನಾಟಿದಾಗ ಶಿಷ್ಯ ಆತ್ಮ ದರ್ಶನಕ್ಕೆ ಯತ್ನಿಸುವನು. ಇದುವೇ ಗುರು ಕೃಪೆ.

## ಶರಣಾಗತ ವತ್ಸಲ

ಶರಣಾಗತವತ್ಸಲನಲ್ಲಿ'ನಾನು'ಎಂಬುದು ಶರಣು ಹೋಗಿ ಮರೆಯಾಗ ಬೇಕು.

ನನಗಿಂತ ಮಹತ್ತರವಾದ ಮತ್ತೊಂದು ಶಕ್ತಿಯಿದೆ ಎಂಬ ಅರಿವಾಗಿ ಶರಣು ಹೋಗಬೇಕು.

## ಅಹಂಕಾರ ಆನೆಯಿದ್ದಂತೆ

ಅಹಂಕಾರ ಮದಗಜವಿದ್ದಂತೆ. ಅದರ ಮದವನ್ನಿಳಿಸಬೇಕಾದರೆ ವನ ರಾಜನಾದ ಮೃಗೇಂದ್ರನೇಬೇಕು. ಸಿದ್ಧಿ ಪಡೆದ ಗುರುವಿನ ಬಳಿ ಶಿಷ್ಯ ಸಿಂಹನ ಬಳಿಯ ಆನೆಯಾಗುತ್ತಾನೆ.

## ಹೃದಯ ರಂಗ

ಓ, ಅರುಣಾಚಲೇಶ್ವರ! ನಿನ್ನಲ್ಲಿ ವಿಶ್ವದ ಸಕಲ ಚಿತ್ರವಿದೆ.ಅದು ನಿಂತಲ್ಲೇ ಕಣ್ಮರೆ ಯಾಗುತ್ತದೆ. ಇದರಲ್ಲಿ ಸತ್ಯದ ಚಮತ್ಕಾರವಿದೆ. ನೀನೇ ಆತ್ಮ ನಾಗಿರುವೆ. ನೀನೇ ಹೃದಯದಲ್ಲಿ ನಾನು-ನಾನು ಎಂಬ ಭಾವದಲ್ಲಿರುವೆ. ಹೃದಯ ರಂಗವೇ ನಿನ್ನ ನಾಮವಾಗಿದೆ. ಪರಮಾತ್ಮ ಹೃದಯವೆಂಬುದು ಹೃತ್-ಅಯಂ ಎಂಬ ಎರಡು ಶಬ್ದಗಳಿಂದ ಕೂಡಿದ ಒಂದು ಮಾತು. ಅದರ ಅರ್ಥ ನಾನೇ ಹೃದಯ ಎಂದು.

## ಸತ್ಯ ಸಂದರ್ಶನ

ಆತ್ಮ ಸಂದರ್ಶನದಿಂದಲೇ ಭಗವಂತನ ಸಾಕ್ಷಾತ್ಕಾರ ಅಥವಾ ಸಂದ ರ್ಶನ ಸಾಧ್ಯ.

## ವಿಶ್ವ ಒಂದು ಭ್ರಮೆ

ವಿಶ್ವವು ಒಂದು ಭ್ರಮೆ. ಅದು ನಾನು ಎಂಬುದರ ಅಸ್ತಿವಾರದ ಮೇಲೆ ನಿಂತಿದೆ. ಆತ್ಮದ ಅರಿವಾಗುವ ಮುನ್ನ ಈ ಭ್ರಮೆ ನಿರಸನವಾಗಬೇಕು.

ನಿನ್ನನ್ನು ನೀನು ನೋಡು ಅಂದರೆ ನೀನು ದೇವರನ್ನು ನೋಡುವೆ.

ನಿನ್ನನ್ನು ನೀನು ಅರಿತ ಮೇಲೆ ಇನ್ನೂ ಅರಿಯಬೇಕಾದದ್ದೇ ಉಳಿಯುವುದಿಲ್ಲ.

## ಭಕ್ತಿ–ಜ್ಞಾನ

ಭಕ್ತಿ ಬೇರೆಯಲ್ಲ; ಜ್ಞಾನ ಬೇರೆಯಲ್ಲ; ಎರಡೂ ಒಂದೇ.

'ನಾನು'–'ನನ್ನದು' ಎಂಬುದರಿಂದ ದೂರವಾದದ್ದೇ ನೈಜಭಕ್ತಿ. ಅದೇ ಭಕ್ತಿ ಜೀವನ.

ಎಲ್ಲ ದಾರಿಗಳೂ ಮೋಕ್ಷದತ್ತ ಒಯ್ಯುತ್ತವೆ. ಮೋಕ್ಷದ ದಾರಿ ಸಿಕ್ಕಬೇಕಾದರೆ ಅಹಂಕಾರ, ಮಮಕಾರಗಳು ದಮನಮಾಡಲ್ಪಡಬೇಕು. ಇದಕ್ಕೆ ಮೌನವೇ ಮಹಾ ಮಾರ್ಗ. ಇಲ್ಲವೆ ವೇದಾಂತ ಮಾರ್ಗ ಅಥವಾ ಭಕ್ತಿ ಮಾರ್ಗ ಹಿಡಿಯಬಹುದು. ಯಾವ ಮಾರ್ಗದಿಂದಲಾದರೂ 'ಅಹಂ' ನಿರ್ನಾಮವಾಗಬೇಕು.

## ಸಂನ್ಯಾಸ

ಅಹಂಕಾರವನ್ನು ಪರಿತ್ಯಜಿಸುವುದೇ ಸಂನ್ಯಾಸ.

ಶಾಂತಿ ಉಕ್ಕಬೇಕಾದುದು ಅಂತರಂಗದಲ್ಲಿ. ಶಾಂತಿ ಯಾವಾಗಲೂ ಹೊರಗಿನಿಂದ ಬರಲು ಸಾಧ್ಯವಿಲ್ಲ.

ಶಾಂತಿ ಮನಸ್ಸಿನ ಒಂದು ಸ್ಥಿತಿ. ನಿರ್ಮುಕ್ತನೇ ಶಾಂತಿಯನ್ನು ಹೊಂದಬಲ್ಲನು.

ಸ್ವಾರ್ಥವಿಲ್ಲದ ಸೇವೆ ಅಹಂಕಾರವನ್ನು ಕಳೆಯುವುದು.

## ಮನಸ್ಸು

ಮನಸ್ಸಿನ ಮೂಲವನ್ನು ಅರಿಯದಿದ್ದರೆ 'ಮಾಯೆ'ಯ ಬಳಿಯಿಂದ ಪಾರಾಗುವುದು ಅಸಾಧ್ಯ.

'ನಾನು' ಎಂಬ ವಿಚಾರ ಮನಸ್ಸಿನ ಅನ್ಯೈರ್ಮಲ್ಯದ ಫಲ.

ಸತ್ಯದ ಅರಿವಾಗುವ ಮೊದಲೇ ಮನಸ್ಸು ಶುದ್ಧವಾಗಿರಬೇಕು.

ಜ್ಞಾನಿಯಾದವನಿಗೆ ಜಗತ್ತೆಲ್ಲ ಒಂದು ಚಿತ್ರಶಾಲೆಯಂತೆ ತೋರುತ್ತದೆ.

## ಸಮಾಧಿ

ಕೇವಲ ನಿರ್ವಿಕಲ್ಪ ಸಮಾಧಿಯಿಂದ ಸಹಜ ನಿರ್ವಿಕಲ್ಪ ಸಮಾಧಿಗೆ ಹೋಗಬಹುದು. ಅದೇ ಅಂತಿಮ ಅರಿವು.

## ಧ್ಯಾನ

ಎಲ್ಲರೂ ಅವರವರ ನಿಜ ಸ್ವರೂಪವನ್ನರಿಯಬೇಕು.

ಜೀವನ ಮತ್ತು ಸರಳಚಿಂತನೆಯು ಹಾದಿಗೆ ಸಾಧನೆ ಎನ್ನುತ್ತಾರೆ.

ಶ್ರದ್ಧೆಯಿಂದ ಕೂಡಿದ ಧ್ಯಾನವೇ ಸತ್ಯದ ಮಹಾದ್ವಾರ.

ಈಶ್ವರನು ಬೇರೆ, ನಾನು ಬೇರೆ ಎಂಬ ಭಾವಕ್ಕಿಂತ 'ಅವನು–ನಾನು' ಒಂದೇಎಂಬುದು ಪಾವನವಾದುದು. ನಾನೇ' ದೇವರು.

ಅನಿರ್ವಚನೀಯವಾದ ನಿರ್ಗುಣನಿರಾಕಾರ ಸರ್ವಸ್ವರೂಪದ ಅರಿವಾಗ ಬೇಕಾಗಿಲ್ಲ ದೇಹಾತ್ಮ ಬುದ್ಧಿ ಲಯಗಬೇಕು.

ಸತ್ಯವೇ ನಾನು; ನಾನೇ ಸತ್ಯ.

ತ್ಯಾಗ ಸೇವೆಯಾದಾಗ ಸಾಧನೆಯು ಕೈವಲ್ಯವಾಗುವುದು.

ಸಾಧನೆಯ ಹೊರತು ಸಿದ್ಧಿಯಾಗುವುದಿಲ್ಲ.

## ಜ್ಞಾನ

ಸಂತತ ಪರಿಶ್ರಮದಿಂದ ನಾನುಯಾರು? ಎಂಬುದನ್ನು ನಿನ್ನ ಅಂತರ್ಯ ದಲ್ಲಿ ವಿಚಾರಿಸುತ್ತಿದ್ದರೆ ನೀನು ನಿನ್ನ ಆತ್ಮ ಸ್ವರೂಪವನ್ನು ತಿಳಿಯುವೆ.

ಮನಸ್ಸು ಬರಿ ಆಲೋಚನೆಗಳು. ಅದು ಒಂದು ವಿಶಿಷ್ಟ ಚೈತನ್ಯ ಸ್ವರೂಪ. ಅದು ತನಗೆ ತಾನೇ ವಿಶ್ವವಾಗಿ ಕಲ್ಪಿಸಿಕೊಳ್ಳುತ್ತದೆ.

ನಿನಗೆ ನೀನೇ ಸಹಾಯಮಾಡಿಕೋ. ಅನಂತರ ನೀನು ಪ್ರಪಂಚಕ್ಕೆ ಸಹಾಯ ಮಾಡಬಲ್ಲೆ.

## ಬ್ರಹ್ಮಚರ್ಯ

ಬ್ರಹ್ಮಚರ್ಯದಿಂದ ತೇಜಸ್ಸು, ಓಜಸ್ಸು ಮೇಧಸ್ಸು ಎಲ್ಲವೂ ರಕ್ಷಿತವಾಗುವುವು.

## ಉಪದೇಶ

ವಸ್ತುವಿನ ಸ್ವರೂಪಜ್ಞಾನವಿತ್ತು ಅದರ ಬಳಿ ಸಾಗಲು ದಾರಿತೋರುವುದೇ ಉಪದೇಶ.

## ತಪಸ್ಸು

ಎಲ್ಲಿಂದ ನಾನು ಎಂಬ ಭಾವವು ಹೊರಕ್ಕೆ ಚಿಮ್ಮುತ್ತದೆಯೆಂಬುದನ್ನು ಕಾಯುತ್ತಿದ್ದರೆ ಮನಸ್ಸು ಅದರಲ್ಲಿ ಲೀನವಾಗುತ್ತದೆ ಅದೇ ತಪಸ್ಸು.

ಶಾಂತಿಗೆ ಹಾದಿ ಸಮಾಜಸೇವೆ. ತನ್ನ ಆತ್ಮದಲ್ಲೇ ಲೀನವಾಗುವ ಕಾರ್ಯ ಕೈಗೊಳ್ಳುವ ಮುನ್ನ ಮನುಷ್ಯನು ತನ್ನ ಸಂಪೂರ್ಣ ಶಕ್ತಿಯನ್ನು ತನ್ನ ಸಮಾಜದ ಉತ್ಕರ್ಷೆಗೆ ಧಾರೆಯೆರೆದು ಅದನ್ನು ವೃದ್ಧಿಗೊಳಿಸಲು ಪ್ರಯತ್ನಿಸಬೇಕು.

ದೇವರನ್ನು ನಂಬು; ನಿನ್ನಲ್ಲಿ ನಂಬುಗೆ ಇಡು. ಅದು ಎಲ್ಲವನ್ನೂ ಗುಣಮಾಡುತ್ತದೆ.

ಉತ್ತಮವಾದದ್ದನ್ನೇ ಯೋಚಿಸು; ಉತ್ತಮೋತ್ತಮತೆಗೆ ಸತತ ಪ್ರಯತ್ನಮಾಡು. ಅಂತ್ಯದಲ್ಲಿ ನಿನಗೆ ಎಲ್ಲವೂ ಸುಗಮವಾಗಿ ಸಿದ್ಧಿಸುತ್ತವೆ.

ಹಿರಿದಾದುದನ್ನೇ ಆಶಿಸು; ಉದಾತ್ತತೆಯನ್ನು ಪಡೆಯಲೆತ್ನಿಸು; ಆದರಲ್ಲಿ ಸಣ್ಣಪುಟ್ಟ ಅಭಿಲಾಷೆಗಳೆಲ್ಲ ತಾನಾಗಿಯೇ ನೆರವೇರುವುವು.

ಆತ್ಮ ಸ್ವರೂಪದರ್ಶನವೇ ನಿಜವಾದ ಜನ್ಮ. ದೇಹಾಭಿಮಾನವಿರುವವರೆಗೂ ಇದು ಸಾಧ್ಯವಿಲ್ಲ.

ಸರ್ವಧಾರಣಾ ಶಕ್ತನಾದ ದೇವನಲ್ಲಿ ಶರಣಾಗತನಾದವನಿಗೆ ನೈಜ ಸುಖ ಮತ್ತು ಶಾಂತಿ ದೊರೆಯುವುವು.

## ೧೫

### ಶಾಂತಿ ಸಂದೇಶ

ಬಿರುಗಾಳಿಗೆ ಸಿಕ್ಕಿದ ಸಾಗರದಂತೆ ಹಲವಾರು ಕಾರಣಗಳಿಂದ ಅಶಾಂತಿ ಗೀಡಾಗಿ ಗಡಿ ಬಿಡಿಯ ಸಂತೆಯ ಕೋಲಾಹಲದಂತೆ ಕಂಡು ಬರುವ ಈ ಪ್ರಪಂಚಕ್ಕೆ ಶಾಂತಿಯ ಸಂದೇಶವನ್ನು ಬೀರುವ ಹೊಣೆಗಾರಿಕೆ ನಮ್ಮ ಭರತ ಖಂಡಕ್ಕೆ ಸೇರಿದುದು ಎಂದು **ಪೂಜ್ಯ ಗಾಂಧೀಜಿ** ಒಂದೆಡೆ ಹೇಳಿದ್ದಾರೆ. ಭಾರತೀಯರ ಸಂಸ್ಕೃತಿಯು ಪ್ರಶಾಂತವಾದ ಅರಣ್ಯಗಳಲ್ಲಿ, ಪುಣ್ಯಶೀಲರಾದ ಋಷಿಮುನಿಗಳ ಆಶ್ರಮಗಳಲ್ಲಿ ಪ್ರಾರಂಭವಾಗಿರುವುದರಿಂದ ಭಾರತೀಯರು ಪ್ರಾರಂಭದಲ್ಲೂ ಪರಿಣಾಮದಲ್ಲೂ ಶಾಂತಿಯನ್ನೇ ಬಯಸತಕ್ಕವರು,ಶಾಂತಿಯನ್ನೇ ಹಂಬಲಿಸತಕ್ಕವರು ಎಂದು ನೋಬೆಲ್ ಬಹುಮಾನವನ್ನು ಪಡೆದು ವಿಶ್ವದ ಮಹಾಕವಿಗಳೆನಿಸಿದ **ರವೀಂದ್ರನಾಥ ಟಾಗೂರರು** ಒಂದೆಡೆ ಬರೆದಿದ್ದಾರೆ. ಭರತಖಂಡದ ಸನಾತನಧರ್ಮದ ಪ್ರತಿನಿಧಿಗಳಾಗಿ ಅಮೆರಿಕಾ ಮೊದಲಾದ ಪಾಶ್ಚಾತ್ಯ ದೇಶಗಳಿಗೆ ಹೋಗಿ ನಮ್ಮ ಧರ್ಮ, ದರ್ಶನ, ಸಂಸ್ಕೃತಿ ಮೊದಲಾದುವುಗಳ ಮೇಲೆ ಮಹತ್ತ್ವವಾದ ಭಾಷಣಗಳನ್ನು ಮಾಡಿ ತಮ್ಮ ಅತ್ಯದ್ಭುತವಾದ ಪ್ರತಿಭೆ ಮತ್ತು ಅನುಭವಗಳ ಮೂಲಕ ಪಾಶ್ಚಾತ್ಯರಿಗೆ ಭಾರತದಬಗ್ಗೆ ಪ್ರೇಮಾದರಗಳು ಉಂಟಾಗುವಂತೆ ಮಾಡಿದ **ಸ್ವಾಮಿ ವಿವೇಕಾನಂದರೂ** ಕೂಡ ಅಶಾಂತಿಯಿಂದ ಕೂಡಿದ ಲೋಕವನ್ನು ಶಾಂತಿಯ ಮಾರ್ಗಕ್ಕೆ ತಿರುಗಿಸುವ ಕರ್ತವ್ಯ ಪ್ರಾಚೀನ ಋಷಿಮುನಿಗಳ ಕುಲಗೋತ್ರಕ್ಕೆ ಸೇರಿದ ಭಾರತೀಯರಾದ ನಮ್ಮ ಕರ್ತವ್ಯ ಎಂಬುದನ್ನು ಅಡಿಗಡಿಗೆ ಹೇಳಿದ್ದಾರೆ.

ಈ ಮೇಲೆ ಕಂಡ ಮೂವರು ವಿಭೂತಿ ಪುರುಷರು ಬೇರೆ ಬೇರೆ ಸಂದರ್ಭ ಸನ್ನಿವೇಶಗಳಲ್ಲಿ ಹೇಳಿರುವ ಮಾತುಗಳು ಒಂದೇ ಅರ್ಥದಲ್ಲಿ ಪರಿಣಮಿಸುತ್ತವೆ. ಇದಕ್ಕೆ ಕಾರಣ ಇವರೆಲ್ಲರೂ ಒಂದೇ ಧರ್ಮ, ಒಂದೇ ಸಂಸ್ಕೃತಿ, ಒಂದೇ ದರ್ಶನದ ಪರಂಪರೆಗೆ ಸೇರಿದವರಾಗಿರುವುದೇ ಆಗಿದೆ. ಭಗವಾನ್ ರಮಣಮಹರ್ಷಿಗಳೂ ಕೂಡ, 'ದೇವರಲ್ಲಿ ಶರಣಾದವರಿಗೆ ಸುಖ ಮತ್ತು ಶಾಂತಿ ದೊರೆ

ಯುವುವು.' ಎಂದು ಹೇಳಿ ತಮ್ಮ ಶಾಂತಿ ಸಂದೇಶದ ಗುಟ್ಟನ್ನು ಉಪದೇಶ ವೊಂದರಲ್ಲಿ ಪ್ರಕಟ ಮಾಡಿದ್ದಾರೆ.

ಪ್ರಪಂಚದಲ್ಲಿಯೇ ಪ್ರಾಚೀನ ಹಾಗೂ ಪವಿತ್ರತಮ ಸಾಹಿತ್ಯವೆನಿಸಿದ ವೇದಮಂತ್ರಗಳ ಕಟ್ಟಕಡೆಯಲ್ಲಿ "ಶಾಂತಿಃ ಶಾಂತಿಃ ಶಾಂತಿಃ" ಎಂಬ ಮಾತು ಮೂರುಸಾರಿ ಬರುತ್ತದೆ. ಇದರ ಕಾರಣ ವೇದವು ಮಾನವ ಜಾತಿಗೆ ಮಾತು, ಮನಸ್ಸು ಮತ್ತು ಕಾರ್ಯಗಳಲ್ಲಿ ಶಾಂತಿಯನ್ನು ಬೋಧಿಸುವ ಸಲುವಾಗಿ ಪ್ರಕ ಟವಾದುದು ಎಂಬುದೇ ಆಗಿದೆ. ಸಂಸ್ಕೃತದ ಒಂದು ನೀತಿ ಗ್ರಂಥದಲ್ಲಿ "ಅಶಾಂ ತಸ್ಯ ಕುತಸ್ಸುಖಮ್" ಅಂದರೆ, ಮನಸ್ಸಿನಲ್ಲಿ ಶಾಂತಿ ಸಮಾಧಾನವಿಲ್ಲದವನಿಗೆ ಸುಖವೆಲ್ಲಿ? ಎಂಬ ಉಪದೇಶ ವಾಕ್ಯವಿದೆ. ಮಹಾಭಾರತದ ಮುಖ್ಯ ಕಥಾನಾ ಯಕನಾದ ಯುಧಿಷ್ಠಿರ ಮಹಾರಾಜನು ಒಂದು ಸಂದರ್ಭದಲ್ಲಿ ಈ ಮುಂದಿ ನಂತೆ ಹೇಳಿದ್ದಾನೆ:-

"ಸತ್ಯಂ ಮಾತಾ, ಪಿತಾ ಜ್ಞಾನಂ, ಧರ್ಮೋ ಭ್ರಾತಾ, ದಯಾ ಸಖಾ।
ಶಾಂತಿಃ ಪತ್ನೀ, ಕ್ಷಮಾ ಪುತ್ರಾ, ಷಡೇತೇ ಮಮ ಬಾಂಧವಾಃ ॥

ಅಂದರೆ, ನನಗೆ ಸತ್ಯವೇ ತಾಯಿ, ಜ್ಞಾನವೇ ತಂದೆ; ಧರ್ಮವು ಸಹೋ ದರ, ದಯೆಯು ಗೆಳೆಯ; ಶಾಂತಿಯು ಹೆಂಡತಿ; ಕ್ಷಮೆಯು ಮಗ; ಈ ಆರು ತನ್ನ ಸಮೀಪದ ಬಂಧುಗಳು"

ರಾಮಾಯಣದಲ್ಲಿ ಪ್ರಸಿದ್ಧನಾಗಿರುವ ಋಷ್ಯಶೃಂಗನ ಪತ್ನಿ, ಲೋಮ ಪಾದ ರಾಜನ ಮಗಳು 'ಶಾಂತಾ' ಎಂಬ ಹೆಸರಿನಿಂದ ಪ್ರಸಿದ್ಧಳಾಗಿದ್ದಾಳೆ. ಋಷಿಗಳಿಗೆ ಪ್ರಿಯವಾದ ಶಾಂತಿಯು ಇಲ್ಲಿ ಮಗಳ ಹೆಸರನ್ನು ತಾಳಿದೆ.

ಈ ಮೇಲೆ ಉದಹರಿಸಿದ ವೇದ, ಶಾಸ್ತ್ರ, ಪುರಾಣಗಳು ವ್ಯಕ್ತಿಗೂ ಸಮಾಜಕ್ಕೂ ಪ್ರಪಂಚಕ್ಕೂ ಶಾಂತಿಯು ಅಗತ್ಯ ಎಷ್ಟು ಮುಖ್ಯವಾದುದು ಎಂಬುದನ್ನುಅರಿಯುಲು ಸಹಾಯವಾಗಿವೆ. 'ಶಾಂತಿ' ಎಂಬ ಶಬ್ದಕ್ಕೆ ನಿಘಂಟು ಕಾರರು ಮನಸ್ಸಿನ ತೃಪ್ತಿ, ಸಮಾಧಾನ, ತಾಳ್ಮೆ, ವಿಕಾರಗಳಿಲ್ಲದಿರುವಿಕೆ, ಮೌನದಿಂದಿರುವಿಕೆ ಇತ್ಯಾದಿ ಅರ್ಥಗಳನ್ನು ಬರೆದಿದ್ದಾರೆ. ಚೆನ್ನಾಗಿ ವಿಚಾರ

ಮಾಡಿ ನೋಡಿದರೆ 'ಶಾಂತಿ' ಎಂಬ ಶಬ್ದಕ್ಕೆ ಇನ್ನೂ ಹೆಚ್ಚಿನ ಅರ್ಥವ್ಯಾಪ್ತಿ ಉಂಟೆಂದು ಹೇಳಬಹುದಾಗಿದೆ.

ಶಾಂತಿಯ ಗುಟ್ಟು ಗುರಿಗಳನ್ನು ತಿಳಿಯುವ ಮೊದಲು ಅದಕ್ಕೆ ವಿರುದ್ಧವಾದ ಅಶಾಂತಿಯ ಲಕ್ಷಣಗಳನ್ನೂ, ಕಾರಣಗಳನ್ನೂ ತಿಳಿಯುವುದು ಅದಕ್ಕೆ ಪರಿಹಾರವನ್ನು ಅರಿತು ಕೊಳ್ಳುವುದು ಅಗತ್ಯವೆಂದು ತೋರುತ್ತದೆ. ಮನುಷ್ಯನ ಮನಸ್ಸಿನ ತಳಮಳಕ್ಕೆ, ಕಳವಳಕ್ಕೆ ಮುಖ್ಯಕಾರಣ 'ಆಶೆ ಮತ್ತು ಅಂಜಿಕೆಗಳು' ಎಂದು ಭಕ್ತಿ ಭಂಡಾರಿ ಬಸವಣ್ಣನವರು ಒಂದೆಡೆ ಹೇಳಿದ್ದಾರೆ. ಇದಕ್ಕೆ ಪ್ರಪಂಚದ ಚರಿತ್ರೆಯಲ್ಲಿ ಬೇಕಾದಷ್ಟು ನಿದರ್ಶನಗಳು ನಮಗೆ ಸಿಕ್ಕುತ್ತವೆ.

ರಾಮಾಯಣ ಕಾಲದ ಭಾರತ ದೇಶದಲ್ಲಿ ಲಂಕಾರಾಜ್ಯದ ಅರಸನಾದ ರಾವಣನು ಸಮಾಜದ ನೀತಿ ನಿಯಮಗಳಿಗೆ ವಿರುದ್ಧವಾಗಿ ಅಯೋಧ್ಯೆಯ ಅಧಿಪತಿಯಾದ ಶ್ರೀರಾಮಚಂದ್ರನ ಧರ್ಮಪತ್ನಿ ಸೀತಾದೇವಿಯನ್ನು ಕಾಮಿಸಿದುದೂ ಕಿಷ್ಕಿಂಧೆಯ ಅರಸನಾದ ವಾಲಿಯು ಧರ್ಮಕ್ಕೆ ವಿರುದ್ಧವಾಗಿ ತನ್ನ ತಮ್ಮನಾದ ಸುಗ್ರೀವನ ಹೆಂಡತಿಯಾದ ರುಮಾದೇವಿಯನ್ನು ಪ್ರೇಮಿಸಿದುದೂ ಅಂದಿನ ಕಾಲದ ಅಶಾಂತಿಗೆ ಕಾರಣವಾಯಿತು. ಅದರ ಪರಿಣಾಮ ದೇಶದಲ್ಲಿ ಕೋಲಾಹಲವನ್ನು ಉಂಟುಮಾಡಿತು. ಕಟ್ಟಕಡೆಯಲ್ಲಿ ಸುಗ್ರೀವನಿಂದ ವಾಲಿಯೂ ಶ್ರೀ ರಾಮನಿಂದ ರಾವಣನೂ ಸಂಹಾರವಾದ ಮೇಲೆ ದೇಶದಲ್ಲಿ ಶಾಂತಿ ಸ್ಥಾಪನೆಯಾಯಿತು. ಅನಂತರ ಮಹಾಭಾರತದ ಕಾಲದಲ್ಲಿ ಹಸ್ತಿನಾವತಿಯ ಪ್ರಭುವಾದ ಕೌರವ ರಾಯನು ತನ್ನ ಸಹೋದರರಾದ ಪಾಂಡವರಿಗೆ ನ್ಯಾಯವಾಗಿ ಬರಬೇಕಾದ ರಾಜ್ಯವನ್ನು ಕೊಡದೆ ಲೋಭಕ್ಕೆ ಗುರಿಯಾದುದರಿಂದ ಅಂದಿನ ಕುರುಕ್ಷೇತ್ರದಲ್ಲಿ ಭಯಂಕರವಾದ ಯುದ್ಧನಡೆದು ಭಗವಂತನಾದ ಶ್ರೀ ಕೃಷ್ಣನ ನೇತೃತ್ವದಲ್ಲಿ ಕೌರವರ ವಿನಾಶದೊಡನೆ ಪಾಂಡವರ ವಿಜಯದೊಂದಿಗೆ ಭಾರತದಲ್ಲಿ ಶಾಂತಿ ಸ್ಥಾಪನೆಯಾಯಿತು. ಭಾರತದ ಪ್ರಾಚೀನ ಮಹಾ ಗ್ರಂಥಗಳೆನಿಸಿದ ಈ ರಾಮಾಯಣ-ಭಾರತಗಳ ಕಥೆಯಿಂದ ಜನರು ಶಾಸ್ತ್ರ ಮರ್ಯಾದೆಯನ್ನೂ ಸಮಾಜದ ಕಟ್ಟಳೆಗಳನ್ನೂ

ನೀತಿನಿಯಮಗಳನ್ನೂ ಮೀರುವುದರಿಂದ ದೇಶದಲ್ಲಿ ಅಶಾಂತಿಗೆ ಕಾರಣವಾಗ್ತು ವುದೆಂದೂ ಮುಂದೆ ಅದರಿಂದ ಅನೇಕಾನೇಕ ಕೋಲಾಹಲ ಪ್ರಸಂಗಗಳು ನಡೆದು ಕಡೆಗೆ ಶಾಂತಿ ಸ್ಥಾಪನೆಯಾಗುವುದೆಂದೂ ನಾವು ತಿಳಿಯಬಹುದಾಗಿದೆ.

ಮುಂದೆ ಇತಿಹಾಸಕಾಲದಲ್ಲಿಯೂ ಇಂತಹ ಕೆಲವು ಉತ್ತಮವಾದ ಘಟನೆಗಳನ್ನು ನಾವು ಚರಿತ್ರೆಯಿಂದ ಓದಿ ತಿಳಿಯಬಹುದಾಗಿದೆ. ಕ್ರಿ.ಶ.ಕ್ಕೆ ಪೂರ್ವದಲ್ಲಿ ನಮ್ಮ ಭಾರತದ ಮಹಾ ಚಕ್ರವರ್ತಿಯಾಗಿದ್ದ ಪ್ರಿಯದರ್ಶಿ **ಅಶೋಕ ಮಹಾರಾಜನು** ತಾನು ದೊಡ್ಡ ಸಾರ್ವಭೌಮನಾಗಬೇಕೆಂಬ ಮಹತ್ವಾಕಾಂಕ್ಷೆಯಿಂದ ಅನೇಕಾನೇಕ ಯುದ್ಧಗಳನ್ನು ಮಾಡಿ ರಾಜ್ಯಗಳ ಮೇಲೆ ರಾಜ್ಯಗಳನ್ನು ಗೆದ್ದು ಕಡೆಗೆ ಕಳಿಂಗ ದೇಶದ ಮೇಲೆ ವಿಜಯವನ್ನು ಪಡೆದಾಗ ಅಲ್ಲಿ ನಡೆದ ಕೊಲೆ ಸುಲಿಗೆ ರಕ್ತಪಾತಗಳು ವಿವೇಕಿಯೂ ಸುಸಂಸ್ಕೃತನೂ ಆದ ಆತನ ಮನಸ್ಸಿನ ಮೇಲೆ ತತ್‌ಕ್ಷಣ ಪರಿಣಾಮವನ್ನುಂಟುಮಾಡಿ ತನ್ನ ಹಿರಿಯಾಸೆಯು ಇಷ್ಟೊಂದು ಜನರ ದುಃಖಕ್ಕೆ ಕಾರಣವಾಯಿತೆಂಬುದರ ಅರಿವನ್ನು ಉಂಟುಮಾಡಿ ಆವನನ್ನು ಶಾಂತಿಯ ದಿವ್ಯಾಶ್ರಮಕ್ಕೆ ಬಂದು ನಿಲ್ಲುವಂತೆ ಮಾಡಿತು. ಇದೇ ಪ್ರಕಾರ ಯೂರೋಪಿನ ಹಾಗೂ ವಿಶ್ವದ ಚರಿತ್ರೆಯಲ್ಲಿ ಪ್ರಸಿದ್ಧನಾದ ಗ್ರೀಸ್ ದೇಶದ ಪ್ರಭು ಅಲೆಕ್ಸಾಂಡರನು ಪ್ರಪಂಚದ ಬಹುಭಾಗವನ್ನು ಜಯಿಸಿ, ಅಪಾರವಾದ ಐಶ್ವರ್ಯವನ್ನು ಕೂಡಿಟ್ಟು ಕಡೆಗೆ ಇದೆಲ್ಲವೂ ಮರಣಾನಂತರ ತನ್ನ ಜೊತೆಗೆ ಬರುವುದಿಲ್ಲವೆಂದು ಅರಿತು ಕಡೆಗಾಲದಲ್ಲಿ ತನ್ನ ಬಂಧು ಮಿತ್ರರಿಗೆ ನನ್ನ ದೇಹವನ್ನು ಸಮಾಧಿಗೆ ಕೊಂಡೊಯ್ಯುವಾಗ ನನ್ನ ಬರಿದಾದ ಎರಡು ಕೈಗಳನ್ನೂ ಕೆಳಗೆ ಜೋಲಾಡುವಂತೆ ಮಾಡಿ ಜಗತ್ತಿನ ಜನರಿಗೆ ಈ ಮೂಲಕ ನನ್ನ ಅಂತಿಮ ಸಂದೇಶವನ್ನು ತಿಳಿಸಬೇಕೆಂದು ಹೇಳಿ ಐಹಿಕ ಜೀವನದಿಂದ ಕಣ್ಮರೆಯಾದನೆಂಬ ಕಥೆ ಪ್ರಸಿದ್ಧವಾಗಿದೆ. ಅಫಘಾನಿಸ್ಥಾನದ ಅರಸನಾಗಿದ್ದ ಘಜನಿ ಮಹಮದನೆಂಬ ಶೂರ ತರುಣನು ಕೇವಲ ತನ್ನ ಮತದ ಹುಚ್ಚಿನಿಂದ ಆವೇಶಗೊಂಡು ಆ ಕಾಲದಲ್ಲಿ ತಮ್ಮ ತಮ್ಮಲ್ಲಿ ಕಲಹವಾಡುತ್ತಿದ್ದ ಉತ್ತರ ಭಾರತದ ರಾಜರುಗಳ ಮೇಲೆ ದಂಡೆತ್ತಿಬಂದು ವಿಜಯದಮೇಲೆ ವಿಜಯವನ್ನು ಗಳಿಸಿ ಸೌರಾಷ್ಟ್ರದ

ಸೋಮನಾಥ ದೇವಾಲಯ ಮೊದಲಾದುವುಗಳನ್ನು ಹದಿನೇಳುಸಾರಿ ಕೊಳ್ಳೆ ಹೊಡೆದು ಅಪಾರವಾದ ಐಶ್ವರ್ಯವನ್ನು ತನ್ನ ರಾಜಧಾನಿಯಲ್ಲಿ ಕೂಡಿಹಾಕಿ ಅದನ್ನು ತನ್ನ ಮರಣ ಪರ್ಯಂತವಾಗಿ ಎಚ್ಚರದಿಂದ ಕಾಪಾಡಿಕೊಂಡು ಬಂದು ಕಡೆಗೆ ತನಗೆ ಮರಣಕಾಲ ಬಂದಾಗ ಕೋಟಿ ಗಟ್ಟಲೆ ಜನರ ಕೊಲೆ, ಸುಲಿಗೆಗಳಿಂದ ಗಳಿಸಿದ ಈ ಐಶ್ವರ್ಯವೆಲ್ಲವೂ ಸತ್ತಮೇಲೆ ತನ್ನ ಹಿಂದೆ ಬರದೆ ಈ ಭೂಮಿಯಲ್ಲಿಯೇ ನಿಂತು ಹೋಗುವುದೆಂದು ಮನಗಂಡು ತಾನು ಮಾಡಿದ ಲೆಕ್ಕವಿಲ್ಲದಷ್ಟು ಪಾಪಕರ್ಮಗಳಿಗಾಗಿ ಪಶ್ಚಾತ್ತಾಪ ಪಟ್ಟು ಕಣ್ಣೀರಿನ ಕಾಲುವೆ ಹರಿಸಿದನೆಂಬ ಕಥೆ ಕೂಡ ಚರಿತ್ರೆಯಲ್ಲಿ ಪ್ರಸಿದ್ಧವಾಗಿದೆ.

ಈ ಮೇಲೆ ಕಂಡ ಮೂವರು ಮಹಾಪುರುಷರ ಇತಿಹಾಸದಿಂದ ಅಶಾಂತಿಗೆ ಕಾರಣವಾವುದು? ಶಾಂತಿಯ ನೆಲೆ ಎಲ್ಲಿದೆ? ಎಂಬುದನ್ನು ಸುಲಭವಾಗಿ ಊಹಿಸಬಹುದು. ತನಗೆ ಎಷ್ಟು ಬೇಕೋ ಅಷ್ಟಕ್ಕಿಂತಲೂ ಹೆಚ್ಚಾಗಿ ಹೆಣ್ಣು, ಹೊನ್ನು, ಮಣ್ಣುಗಳನ್ನು ಬಯಸುವುದು, ಅದಕ್ಕಾಗಿ ಪರರನ್ನು ಪೀಡಿಸುವುದು, ಘೋರ ಕರ್ಮಗಳನ್ನು ನಡೆಸುವುದು ದೇಶದ ಹಾಗೂ ಪ್ರಪಂಚದ ಅಶಾಂತಿಗೆ ಕಾರಣವಾಗುತ್ತದೆ. ದೇವರು ತನಗೆ ಕೊಟ್ಟುದರಲ್ಲಿ ನ್ಯಾಯ ಮಾರ್ಗದಿಂದ ತನ್ನ ಕೈಸೇರಿದುದರಲ್ಲಿ ಮನಸ್ಸಿನ ಸಮಾಧಾನವನ್ನು ಹೊಂದಿ ತನ್ನಂತೆಯೇ ಇತರರ ಸುಖ ದುಃಖಗಳು ಎಂಬುದನ್ನು ಅರಿತು ಆಚರಿಸುವುದರಲ್ಲಿಯೇ, ಗುರುಹಿರಿಯರ ಮಾತಿಗೆ ತಲೆಬಾಗುವುದರಲ್ಲಿಯೇ ಶಾಂತಿಯ ಮಾರ್ಗವಿದೆ ಎಂಬುದನ್ನು ನಾವು ಸುಲಭವಾಗಿ ತಿಳಿಯಬಹುದಾಗಿದೆ.

ಮನುಷ್ಯನ ಮನಸ್ಸು ಸೃಷ್ಟಿಯಲ್ಲಿ ಕಾಮ, ಕ್ರೋಧ, ಆಶೆ, ಅಂಜಿಕೆ ಮೊದಲಾದ ಅಶಾಂತಿಯ ಬೀಜಗಳಿಂದ ತುಂಬಿರುತ್ತದೆ. ಈ ಮಾತು ವ್ಯಕ್ತಿಗಳಿಗೆ ಸಂಬಂಧ ಪಟ್ಟಂತೆಯೇ ಸಮಾಜಕ್ಕೂ ದೇಶಕ್ಕೂ ಪ್ರಪಂಚಕ್ಕೂ ಅನ್ವಯಿಸುತ್ತದೆ. ರಷ್ಯಾಬಲವಾಗಬಾರದೆಂದು ಅಮೆರಿಕ, ಅಮೆರಿಕ ಮುಂದು ಹೋಗಬಾರದೆಂದು ರಷ್ಯಾ, ಹಿಂದೂಸ್ಥಾನ ಬಲಗೊಳ್ಳಬಾರದೆಂದು ಪಾಕಿಸ್ಥಾನ, ಪಾಕಿಸ್ಥಾನ ಮೇರೆಮೀರಬಾರದೆಂದು ಅಫಘಾನಿಸ್ಥಾನ, ಇವೆಲ್ಲಾ ಸದಾ ಗುದ್ದಾಡುತ್ತಿರಲೆಂದು ಇಂಗ್ಲೆಂಡ್, ಪರಸ್ಪರವಾಗಿ ಮತ್ಸರ ಮಾಡಿದರೆ ಆಗ

ವಿಶ್ವದ ಅಶಾಂತಿಗೆ ಕಾರಣವಾಗೇಆಗುತ್ತದೆ. ಹಿಂದೆ ಯೂರೋಪಿನಲ್ಲಿ ನಡೆವ ಎರಡು ಮಹಾಯುದ್ಧಗಳ ಚರಿತ್ರೆಯನ್ನು ಅವಲೋಕಿಸಿದರೆ, ಜರ್ಮನಿ, ಇಟಲಿ, ಜಪಾನುಗಳ ಆಶೆ, ಇಂಗ್ಲೆಂಡ್, ಅಮೆರಿಕ, ಫ್ರಾನ್ಸ್‌ಗಳ ಅಂಜಿಕೆ ಇವು ಆ ಮಹಾಯುದ್ಧಗಳ ಮೂಲವೆಂಬುದನ್ನು ನಾವು ಸುಲಭವಾಗಿ ಅರಿಯಬಹುದು. ಈ ಎಲ್ಲ ದೃಷ್ಟಾಂತಗಳಿಂದ ಮಾನವನ ಆಶೆ, ಅಂಜಿಕೆ, ಕಾಮ, ಕ್ರೋಧಗಳು ರಾಷ್ಟ್ರದ ಮತ್ತು ವಿಶ್ವದ ಅಶಾಂತಿಗೆ ಕಾರಣವೆಂಬುದನ್ನು ಒಪ್ಪಿಕೊಳ್ಳುವುದು ಅನಿವಾರ್ಯವಾಗುತ್ತದೆ. ಇವುಗಳ ಪರಿಹಾರಮಾರ್ಗವನ್ನು ಅರಿತು ಅದರ ರಹಸ್ಯವನ್ನು ತಿಳಿಯುವುದು ಈಗ ಅಗತ್ಯವಾಗಿದೆ.

ಶಾಂತಿಯ ದಾರಿಯಾವುದು? ಶಾಂತಿಯಿಂದ ಪ್ರಪಂಚಕ್ಕಾಗುವ ಲಾಭ ವೇನು ? ಜ್ಞಾನಿಗಳು ಶಾಂತಿಯನ್ನು ಯಾವರೀತಿ ಸಾಧಿಸಿದರು? ಎಂಬುದಕ್ಕೆ ಚರಿತ್ರೆಯಲ್ಲಿ ಸುಂದರವಾದ ನಿದರ್ಶನಗಳಿವೆ. ಕಪಿಲವಸ್ತು ರಾಜ್ಯದ ಯುವ ರಾಜನಾಗಿದ್ದ ಸಿದ್ಧಾರ್ಥನು ಜಗತ್ತಿನ ಎಲ್ಲ ಸುಖಸಂಪತ್ತುಗಳನ್ನೂ ಉಳ್ಳವನಾಗಿದ್ದನು. ಪುಣ್ಯಶೀಲನಾದ ಆ ರಾಜಪುತ್ರನಿಗೆ ದಿವ್ಯ ಸುಂದರಿಯಾದ ಯಶೋಧರಾ ಎಂಬ ಹೆಂಡತಿಯಿದ್ದಳು. ಬಾಲಚಂದ್ರನಂತಿದ್ದ ಮಮತೆಯ ಮುದ್ದು ಮಗ ರಾಹುಲನಿದ್ದನು. ತನ್ನ ಮೇಲೆ ಪ್ರೀತಿಯ ಮಳೆಗರೆವ ತಂದೆ ತಾಯಿಗಳಿದ್ದರು. ಇಷ್ಟೆಲ್ಲಾ ಇದ್ದರೂ ಸಿದ್ಧಾರ್ಥನಿಗೆ ಜೀವನದಲ್ಲಿ ಸುಖ ಲಭಿಸಲಿಲ್ಲವೇಕೆ? ಒಬ್ಬರೋಗಿ, ಒಬ್ಬ ಮುದುಕ, ಒಂದು ಹೆಣ, ಅವನ ಕಣ್ಣುಮುಂದೆ ಕಂಡಾಗ ಅವನ ಮನಸ್ಸು ಕೋಲಾಹಲದಿಂದ ಕೂಡಿದುದೇಕೆ? ಕಟ್ಟಕಡೆಗೆ ಆ ರಾಜಪುತ್ರನು ಈ ಸಕಲ ಭೋಗ ಸಾಧನಗಳನ್ನೂ ಬಿಟ್ಟು ಅಡವಿಯ ಕಠೋರ ಜೀವನವನ್ನು ಸ್ವೀಕರಿಸಿ ಹಲವು ವರ್ಷಗಳ ಕಾಲ ಉಗ್ರವಾದ ತಪಸ್ಸನ್ನು ಮಾಡಿ ಅವನು ಕಡೆಗೆ ಗಳಿಸಿಕೊಂಡುದೇನು? ಎಂಬುದನ್ನು ನಾವು ಪ್ರಶ್ನಿಸಿದರೆ ಆಗ ಬುದ್ಧನು ಆರ್ಜಿಸಿದ ಆ ಘನತಮವಾದ ಶಾಂತಿಯ ನೆಲೆ ಅವನ ರಾಜ್ಯದ ಸಂಪತ್ತಿಗಿಂತಲೂ ಎಷ್ಟೋ ಕೋಟಿಪಾಲು ಮೇಲಾದುದೆಂಬುದನ್ನು ಸುಲಭವಾಗಿ ಅರಿಯಬಹುದಲ್ಲವೆ?

ಚೀಣಾದೇಶದ ಮಹಾತ್ಮನಾದ ಕಾನ್‌ಫೂಷಿಯಸ್ಸನು ತನ್ನ ಸಂಸಾರವನ್ನು ತೊರೆದು ಕ್ರೂರಮೃಗಗಳಿಂದ ಕೂಡಿದ ಅರಣ್ಯದಲ್ಲಿ ಹಲವು ಕಾಲ ಅರ

ಸಿದುದೇಕೆ ? ಸತ್ಯಕ್ಕಾಗಿ ವಿಷದ ಪಾತ್ರೆಯನ್ನು ನಗುಮುಖದಿಂದ ಅಪ್ಪಿಕೊಂಡ ಮಹಾತ್ಮನಾದ ಸಾಕ್ರೊಟೀಸನು ಮರಣವನ್ನು ಸ್ವಾಗತಿಸುವ ಚಿತ್ತಸ್ಥೈರ್ಯ ವನ್ನು ಪಡೆದುದು ಯಾವುದರಿಂದ? ಜನರ ಪಾಪಗಳಿಗಾಗಿ ತನ್ನ ಶಿಷ್ಯನೊಬ್ಬನ ಮೋಸದ ದೆಸೆಯಿಂದ ಶಿಲುಬೆಯ ಮೇಲೆ ಸಂತೋಷ ಚಿತ್ತನಾಗಿ ನಿಂತ ಧ ರ್ಮಾತ್ಮನಾದ ಏಸುಕ್ರಿಸ್ತನು ಯಾವುದರ ದೆಸೆಯಿಂದ ಇಂತಹ ಗಂಭೀರವಾದ ಧೈರ್ಯವನ್ನು ಗಳಿಸಿದನು? ಕಾಲಚುರ್ಯ ಸಾಮ್ರಾಜ್ಯದ ಮಹಾಮಂತ್ರಿಯಾ ಗಿದ್ದು ಕಲ್ಯಾಣದ ರಾಜವೈಭವದಲ್ಲಿ ತೇಲಿ ಮುಳುಗುತ್ತಿದ್ದ ಬಸವೇಶ್ವರನು ಅವೆಲ್ಲವನ್ನೂ ತೊರೆದು ಕಪ್ಪಡಿ ಸಂಗಮಕ್ಷೇತ್ರದ ಕಠೋರವಾದ ಸಂನ್ಯಾಸ ಜೀವನಕ್ಕೆ ಹಿಂತಿರುಗಿ ಬಂದುದರ ತಾತ್ಪರ್ಯವಾದರೂ ಏನು ? ಪ್ರಾಚೀನ ಕಾ ಲದ ಜನಕರಾಜ, ಆಧುನಿಕ ಕಾಲದ ಮೈಸೂರಿನ ಮಹಾಪ್ರಭು ನಾಲ್ವಡಿ ಕೃಷ್ಣರಾಜ ಒಡೆಯರು ಅಪಾರವಾದ ರಾಜವೈಭವದಲ್ಲಿದ್ದರೂ ಜೀವನ್ಮುಕ್ತರೂ ರಾಜರ್ಷಿಗಳೂ ಎನಿಸಿಕೊಂಡ ಬಗೆಹೇಗೆ? ಪ್ರಬಲವಾದ ಇಂಗ್ಲಿಷ್ ಸಾಮ್ರಾ ಜ್ಯವನ್ನು ತನ್ನ ಸತ್ಯಾಗ್ರಹಮಾರ್ಗದಿಂದ ಎದುರಿಸಿನಿಂತ ಪೂಜ್ಯ ಗಾಂಧೀಜಿ ಉಗ್ರವಾದ ಸೆರೆಮನೆಯ ವಾಸದಲ್ಲಿ ಕೂಡ ಹರ್ಷಚಿತ್ತರಾಗಿ ಇರುತ್ತಿದ್ದುದರ ರಹಸ್ಯವೇನು? ತಿರುಚ್ಚುಳಿಯ ತನ್ನ ಸುಂದರವಾದ ಸಂಸಾರದ ಸೌಲಭ್ಯಗ ಳನ್ನು ಕಡೆಗಣಿಸಿ, ಮಧುರೆಯ ಮನಮೋಹಕವಾದ ದಿವ್ಯನವ್ಯದೃಶ್ಯಗಳನ್ನು ಮರೆತುಬಿಟ್ಟು,ಶ್ರೀ ಕ್ಷೇತ್ರಅರುಣಾಚಲಕ್ಕೆ ರಮಣ ಮಹರ್ಷಿಗಳು ಧಾವಿಸಿ ಬಂದು ನಾನಾ ಪ್ರಕಾರವಾದ ಕಷ್ಟಕಾರ್ಪಣ್ಯಗಳಿಗೆ ಈಡಾಗಿ ಕಡೆಗೆ ಅಲ್ಲಿ ತಾವು ಆರ್ಜಿಸಿದ ಘನತಮವಾದ ಐಶ್ವರ್ಯವಾದರೂ ಯಾವುದು ? ಎಂಬ ಈ ಇತಿ ಹಾಸದ ಮಹಾಪುರುಷರ ಘಟನೆಗಳಿಂದ ನಾವು ಶಾಂತಿಯ ಸಂದೇಶ ಪಾಠ ವನ್ನು ಸುಲಭವಾಗಿ ಅರಿಯಬಹುದು.

ಭಗವಾನ್ ಗೌತಮ ಬುದ್ಧನ ಜೀವನವು ಕೃತ್ರಿಮವಾದ ಐಶ್ವರ್ಯದ ಮಧ್ಯೆ ಶಾಂತಿಯಿಲ್ಲವೆಂಬುದನ್ನೂ, ಕಾನ್‌ಫ್ಯೂಷಿಯಸ್ಸನ ಕಥೆಯು ಅವಿವೇಕಿ ಗಳ ಮಧ್ಯೆ ವಾಸಿಸುವುದು ಅಶಾಂತಿಗೆ ಕಾರಣವೆಂಬುದನ್ನೂ, ಸಾಕ್ರೊಟೀಸನ ನಿದರ್ಶನವು ಶಾಂತಿಯ ನೆಲೆಯನ್ನು ಅರಿತವರು ಮರಣಕ್ಕೆ ಅಂಜಬೇಕಾಗಿಲ್ಲ

ವೆಂಬುದನ್ನೂ, ಏಸುಕ್ರಿಸ್ತನ ದಿವ್ಯಚರಿತ್ರೆಯು ಪರರ ಪಾಪಗಳ ಪರಿಹಾರಕ್ಕಾಗಿ ತನ್ನ ಪ್ರಾಣವನ್ನು ಬಲಿಕೊಡುವುದರಲ್ಲಿಯೇ ನಿಜವಾದ ಶಾಂತಿ ಉಂಟೆಂಬುದನ್ನೂ, ಬಸವೇಶ್ವರರ ಚರಿತ್ರೆಯು ವಿರುದ್ಧವಾದ ಸನ್ನಿವೇಶವು ರಾಜ ವೈಭವದಿಂದ ಕೂಡಿದ್ದರೂ ಅದನ್ನು ತೊರೆಯುವುದರಲ್ಲಿಯೇ ಶಾಂತಿಯೆಂಬುದನ್ನೂ, ರಾಜರ್ಷಿ ಜನಕ ಮತ್ತು ನಾಲ್ವಡಿ ಕೃಷ್ಣರಾಜರು ಎಂತಹ ವೈಭವದಲ್ಲಿದ್ದರೂ ಮನಸ್ಸನ್ನು ಅನಾಸಕ್ತವನ್ನಾಗಿ ಮಾಡಿಕೊಂಡು ಈಶ್ವರಾರ್ಪಿತ ಬುದ್ಧಿಯಿಂದ ಜೀವಿಸಿದರೆ ಮನುಷ್ಯನು ಶಾಂತಿಯನ್ನು ಪಡೆಯಬಹುದೆಂಬುದನ್ನೂ, ಮಹಾತ್ಮ ಗಾಂಧಿಜಿಯ ದೃಷ್ಟಾಂತವು ಆಕ್ರೆ ಅಂಜಿಕೆಗಳಿಲ್ಲದ ಅನಾಸಕ್ತನು ಸೆರೆಮನೆ ಅರಮನೆಗಳನ್ನು ಸಮವಾಗಿ ಭಾವಿಸುವನೆಂಬುದನ್ನೂ, ರಮಣ ಮಹರ್ಷಿಗಳ ಉದಾಹರಣೆಯು ಕೇವಲ ತನ್ನ ಸಂಸಾರದಲ್ಲಿಯೇ ಮಮತೆಯನ್ನು ಹರಡುವುದಕ್ಕಿಂತ ವಿಶಾಲವಾದ ವಿಶ್ವದ ಬಾಂಧವ್ಯವನ್ನು ಅರಿತು ಬ್ರಹ್ಮೈಕಭಾವನೆಯಿಂದ ಆಚರಿಸುವುದರಲ್ಲಿಯೇ ಮನಶ್ಶಾಂತಿ ಉಂಟೆಂಬದನ್ನೂ ನಮಗೆ ಬೋಧಿಸುತ್ತವೆ.

ಯಾವುದೊಂದು ಕಾರ್ಯದ ಮೂಲವನ್ನು ಅಂದರೆ ಕಾರಣವನ್ನು ತಿಳಿಯದೆ ಜನರು ಅಶಾಂತರಾಗುತ್ತಾರೆ. ಆದರ ನಿಜವಾದ ಕಾರಣವನ್ನು ತಿಳಿದಾಗ ಅವರಿಗೆ ಶಾಂತಿಯೂ ಸುಖವೂ ಸಿಗುತ್ತದೆ. ಪ್ಲೇಗ್ ಮೊದಲಾದ ಅಂಟು ಜಾಡ್ಯಗಳು ಗಂಟುಬಿದ್ದಾಗ ಅಜ್ಞಜನರು ಮಾರಮ್ಮನ ಕೋಪ ಇದಕ್ಕೆ ಕಾರಣವೆಂದು ಭಾವಿಸಿ ಗಡಿಬಿಡಿಗೊಳ್ಳುತ್ತಾರೆ. ವಿವೇಕಿಗಳು ಆದರ ನಿಜವಾದ ಕಾರಣವನ್ನು ತಿಳಿದು ಅದಕ್ಕೆ ಪರಿಹಾರವನ್ನು ಕಲ್ಪಿಸಿ ಸುಖಶಾಂತಿಗಳನ್ನು ಪಡೆಯುತ್ತಾರೆ. ಯಾವುದಾದರೊಂದು ವ್ಯವಹಾರದಲ್ಲಿ ಅಶ್ರದ್ಧೆಯಿಂದಲೋ ದುಂದುಗಾರಿಕೆಯಿಂದಲೋ ಕಷ್ಟನಷ್ಟಗಳಿಗೆಸಿಕ್ಕಿದ ಅಜ್ಞಾನಿಯಾದ ಮನುಷ್ಯನೊಬ್ಬನು ಇದು ನನ್ನ ಪೂರ್ವಜನ್ಮ ಕರ್ಮವೆಂದೂ ಮತ್ತಾರೋ ತನ್ನ ಶತ್ರುಗಳಿಂದ ಹೀಗಾಯಿತೆಂದೂ ಹುಲುಬಿಕೊಂಡು ತನ್ನ ಜೀವನವನ್ನು ವ್ಯರ್ಥಗೊಳಿಸುತ್ತಾನೆ. ವಿವೇಕಿಯಾದ ಮನುಷ್ಯನು ಆಕಸ್ಮಾತ್ ಇಂತಹ ಸನ್ನಿವೇಶಗಳಿಗೆ ಸಿಕ್ಕಿಬಿದ್ದರೂ ಅದನ್ನು ಜಾಣತನದಿಂದ ಪರಿಹಾರ ಮಾಡಿಕೊಂಡು

ಮತ್ತೆ ಲೋಕದಲ್ಲಿ ಸುಖಶಾಂತಿಯನ್ನು ಪಡೆದು ತಲೆ ಎತ್ತಿ ನಿಲ್ಲುತ್ತಾನೆ. ಇತ್ಯಾದಿ ಲೋಕಾನುಭವದ ನಿದರ್ಶನಗಳಿಂದ ನಾವು ನಿಜವನ್ನು ತಿಳಿಯದಿರುವುದೇ ಅಂದರೆ ವಿಶ್ವದ ಕರ್ತೃವಾದ ದೇವರನ್ನೂ ಅವನ ಕಟ್ಟಳೆಗಳನ್ನೂ ಮರೆಯುವುದೇ ಅಶಾಂತಿಗೆ ಕಾರಣವೆಂದೂ ಸತ್ಯವನ್ನು ತಿಳಿಯುವುದೇ ಅದರಂತೆ ನಡೆಯುವುದೇ ಶಾಂತಿಯ ಹಾದಿಯೆಂದೂ ಸುಲಭವಾಗಿ ಅರಿತುಕೊಳ್ಳ ಬಹುದು.

ಶಾಂತಿಯ ಅರ್ಥವನ್ನೂ ಮಹತ್ವವನ್ನೂ ಕೇವಲ ಭಾರತೀಯ ಮುನಿಮುನಿಗಳೇ ತಿಳಿದಿರುವರೆಂದೂ ಪ್ರಪಂಚದ ಮತ್ತಾರಿಗೂ ಇದು ತಿಳಿಯದೆಂದೂ ನಾವು ಭಾವಿಸಲಾಗದು. ಅರಬ್ಬಿದೇಶದ ಮರುಭೂಮಿಯಲ್ಲಿ ಹದಿಮೂರು ಶತಮಾನಗಳ ಹಿಂದೆ ಹುಟ್ಟಿ ಜಗತ್ತಿಗೆ ಧರ್ಮೋಪದೇಶ ಮಾಡಿದ ಹಜರತ್ ಮಹಮ್ಮದ್ ಪೈಗಂಬರರು ತಮ್ಮ ಉಪದೇಶದಲ್ಲಿ ಶಾಂತಿಗೇ ಪ್ರಾಮುಖ್ಯತೆ ಕೊಟ್ಟಿದ್ದಾರೆ. 'ಇಸ್ಲಾಂ' ಎಂಬ ಶಬ್ದಕ್ಕೆ ಅರಬ್ಬಿ ಭಾಷೆಯಲ್ಲಿ 'ಶಾಂತಿ' ಎಂದು ಅರ್ಥವಿದೆ. ಆದ್ದರಿಂದಲೇ ಮುಸ್ಲಿಮರ ಧಾರ್ಮಿಕ ಗುರುತು ಶಾಂತಿಯ ಸಂಕೇತವಾದ 'ಚಂದ್ರ' ಎಂದು ತೋರುತ್ತದೆ. ಮಹಮದೀಯರ ಮತ ಗ್ರಂಥವಾದ 'ಖುರಾನ್‌ನಲ್ಲಿ' ಶಾಂತಿಯನ್ನು ಉಪದೇಶಿಸುವ ಮಂತ್ರಗಳು ಬೇಕಾದಷ್ಟಿವೆ. ಹಜರತ್ ಪೈಗಂಬರರ ಚರಿತ್ರೆಯಲ್ಲಿಯೂ ಶಾಂತಿಯನ್ನು ಆಚರಿಸಿ ತೋರಿಸಿದ ಸನ್ನಿವೇಶಗಳು ಬಹಳವಾಗಿವೆ. ಪ್ರಪಂಚದಲ್ಲಿ ಪ್ರಖ್ಯಾತಗಳಾದ ಹಿಂದು,ಬೌದ್ಧ ಕ್ರಿಸ್ತ ಇಸ್ಲಾಂ, ಮೊದಲಾದ ಮತೋಪದೇಶಕರೆಲ್ಲರೂ ಶಾಂತಿಗೆ ಕೊಟ್ಟ ಮಹತ್ವವು ಅದು ಜನಜೀವನಕ್ಕೆಷ್ಟು ಅಗತ್ಯವೆಂದು ತಿಳಿಯಲು ಕಾರಣವಾಗಿದೆಯಲ್ಲವೆ ?

ನಾನು ಯಾರು? ನಾನು ಎಲ್ಲಿಂದ ಬಂದಿರುವೆ? ಮತ್ತೆ ಎಲ್ಲಿಗೆ ಹೋಗುತ್ತೇನೆ? ಇಲ್ಲಿ ನನ್ನ ಕರ್ತವ್ಯವೇನು? ಈ ಜಗತ್ತಿನ ಸೃಷ್ಟಿಕರ್ತನಾರು ? ಅವನಿಗೂ ನನಗೂ ಇರುವ ಸಂಬಂಧವೇನು? ಎಂಬುದನ್ನು ಅರಿತವನು ಶಾಂತಿಯ ಸೌಭಾಗ್ಯವನ್ನು ಪಡೆಯುತ್ತಾನೆ. ನಮ್ಮ ಪ್ರಾಚೀನಕಾಲದ ಋಷಿಮುನಿಗಳು ಈ ರಹಸ್ಯವನ್ನು ಚೆನ್ನಾಗಿ ಅರಿತಿದ್ದುದರಿಂದಲೇ ಅವರು ಶಾಂತಿಯನ್ನು ಗಳಿಸಿ ಲೋಕಪೂಜ್ಯರಾದುದು. ಅವರ ಸಂತಾನವೇ ಆದ ನಾವುಗಳು ಇಂತಹ ಉದಾತ್ತವಾದ

ತತ್ವಗಳನ್ನು ಮಹಾತ್ಮರಾದ ಆ ವಸಿಷ್ಠ, ವಿಶ್ವಾಮಿತ್ರ, ವ್ಯಾಸ, ವಾಲ್ಮೀಕಿ, ಗೌತಮ ಶುಕ, ಯಾಜ್ಞವಲ್ಕ್ಯ ಮೊದಲಾದ ಪ್ರಾಚೀನ ಮಹರ್ಷಿಗಳೂ ಆಧುನಿಕ ಮಹರ್ಷಿಗಳಾದ ರಾಮಕೃಷ್ಣ ಪರಮಹಂಸ, ಅರವಿಂದಘೋಷ, ವಿವೇಕಾನಂದ, ರಾಮತೀರ್ಥ, ರಮಣ ಮಹರ್ಷಿ, ಮಹಾತ್ಮ ಗಾಂಧಿ ಮೊದಲಾದ ಮಹಾನುಭಾವರೂ ಹೇಳಿದ ಉಪದೇಶರೂಪವಾದಶಾಂತಿಸಂದೇಶವನ್ನು ಕೇಳಿದಾಗಲೇ ನಾವು ನಮ್ಮನ್ನೂ ನಮ್ಮ ದೇಶವನ್ನೂ ನಮ್ಮ ಧರ್ಮವನ್ನೂ ರಕ್ಷಿಸಿಕೊಳ್ಳಲು ಸಮರ್ಥರಾಗುತ್ತೇವೆ. ಜಗತ್ತಿನ ಅಶಾಂತ ವಾತಾವರಣವನ್ನು ಪರಿಹರಿಸಿ ಜನರನ್ನು ಶಾಂತಿಯ ಮಾರ್ಗಕ್ಕೆ ತಿರುಗಿಸುವ ಸಲುವಾಗಿಯೇ ಶ್ರೀ ರಮಣ ಮಹರ್ಷಿಗಳಂತಹ ದಿವ್ಯಾತ್ಮರ ಅವತಾರಗಳಾಗಿವೆ ಎಂಬುದನ್ನು ತಿಳಿಯಲು ನಾವು ಸಮರ್ಥರಾಗುತ್ತೇವೆ.

॥ ಶಾಂತಿಃ ಶಾಂತಿಃ ಶಾಂತಿಃ॥

---

# ವಿದ್ಯಾರ್ಥಿ ಗ್ರಂಥಮಾಲಾ

—:★:—

ಬಿಕರಿಗೆ ಸಿದ್ಧವಾದ ಗ್ರಂಥಗಳು



| | | | |
|---|---|---|---|
| ೧. | ಗಾಂಧಿ ಗೀತೆಗಳು | | .... .... ೦-೪-೦ |
| ೨. | ಸರ್ವಜ್ಞಮೂರ್ತಿ | (ಸಾದಾಪ್ರತಿ) | .... .... ೧-೮-೦ |
| | | (ಉತ್ತಮ ಪ್ರತಿ) | .... .... ೧-೪-೦ |
| ೩. | ಶ್ರೀ ರಮಣ ಮಹರ್ಷಿ | (ಸಾದಾಪ್ರತಿ) | .... .... ೧-೦-೦ |
| | | (ಉತ್ತಮ ಪ್ರತಿ) | .... .... ೧-೧೨-೦ |

